**University of Mysore**

Oriental Research Institute Publications

KANNADA SERIES No. 30

GENERAL EDITOR

H. R. RANGASWAMY IYENGAR, M.A.

*Superintendent, Oriental Research Institute, Mysore*

ಚಾಂಡರಾಜಕೃತ

# ನಳಚಂಪು

# NALACAMPU

OF

CAUNDARAJA

EDITED BY

H. R. RANGASWAMY IYENGAR, M.A.

AND

VIDVAN S. N. KRISHNA JOIS

MYSORE:

PRINTED BY THE SENIOR ASST. DIRECTOR, GOVT. BRANCH PRESS

1952



ಹೊಸಕೋಟೆಯಲ್ಲಿರುವ ವಿಟ್ಠಲ ವಿಗ್ರಹ

# ಪ್ರಸ್ತಾವನ

ಈ ಕಾವ್ಯವು ಒಂದು ಚಂಪೂಗ್ರಂಥ. ಇದನ್ನು ಬರೆದವನು "**ಚೌಂಡರಸಂ** ಕರ್ಣಾಟವಂಶ ಶೃಂಗಾರ ರಸಂ." **ಈತನಿಗೆ ಚೌಂಡ** ರಾಜನೆಂಬ ಹೆಸರೂ ಇದ್ದಿತು. ಈತನು ಈ ನಳಚರಿತ್ರೆಯಲ್ಲದೆ ದಶಕುಮಾರಚರಿತ್ರೆ ಮತ್ತು ಬಾಣಾಸುರವಿಜಯ ಎಂಬೀ ಗ್ರಂಥಗಳನ್ನು ಬರೆದಿರುವುದಾಗಿ ಈ ಕಾವ್ಯದ ಕೊನೆಯಲ್ಲಿರುವ

'ಬಾಣಾಸುರವಿಜಯಂ ಕ
ಲ್ಯಾಣನಳಖ್ಯಾತಿ ದಶಕುಮಾರಚರಿತ್ರಂ ।
ಕ್ಷೋಣೀಜನಕರ್ಣಮನಃ
ಪ್ರೀಣನಮಿವು ಚೌಂಡರಾಜವಿರಚಿತಕೃತಿಗಳ್ ॥'

ಎಂಬ ಕಂದಪದ್ಯದಿಂದ ತಿಳಿದುಬರುವುದು ; ಅಲ್ಲದೆ ಇವನು ರಚಿಸಿರುವ ಈ ಮೂರು ಕಾವ್ಯಗಳಲ್ಲಿ ನಳಚಂಪುವೇ ಕೊನೆಯದೆಂದೂ ಸ್ಪಷ್ಟಪಡು ವುದು. ಇವುಗಳಲ್ಲಿ ದಶಕುಮಾರ ಚರಿತ್ರೆಯನ್ನು ಕಾವ್ಯಕಲಾನಿಧಿ ಸಂಪಾದಕರಾಗಿದ್ದ ಶ್ರೀ॥ ಎಸ್. ಜಿ. ನರಸಿಂಹಾಚಾರ್ಯರು ಮತ್ತು ಶ್ರೀ॥ ಎಂ. ಎ. ರಾಮಾನುಜೈಯಂಗಾರ್ಯರು ಕ್ರಿಸ್ತಾಬ್ದ ೧೯೦೨ರಲ್ಲಿ ಅಚ್ಚುಹಾಕಿಸಿ ಪ್ರಕಾಶಪಡಿಸಿರುವರು. ಸಂಸ್ಕೃತ ಭಾಷೆಯಲ್ಲಿ ಗದ್ಯರೂಪ ದಲ್ಲಿರುವ ಈ ಗ್ರಂಥವನ್ನು ಚಂಪೂರೂಪದಲ್ಲಿ ಕನ್ನಡಿಸಿದಂತೆ

'ಮೊದಲೊಳ್ ದಂಡಿಕವೀಶ್ವರಂ ದಶಕುಮಾರಾಖ್ಯಾತ ಚಾರಿತ್ರಮಂ
ಪದೆಪಿಂ ಸಂಸ್ಕೃತಭಾಷೆಯಿಂ ರಚಿಸಿದಂ ಧಾತ್ರೀಜನಸ್ತೋತ್ರಸ ।
ಮ್ಮದವಪ್ಪಂತದನಾಂ ಪ್ರಸಿದ್ಧಿಯವತಾರಾಕಾರಮಂ ತಾಳ್ದಿ ಸ
ದ್ವಿದಿತಂ ರಂಗದೊಳಾಡಿ ತೋರ್ಪತೆಱದಿಂ ಪೇಳ್ವೆಂ ಸುಕರ್ಣಾಟದಿಂ॥'

ಎಂಬ ಪದ್ಯದಲ್ಲಿ ಕವಿಯು ಹೇಳಿಕೊಂಡಿರುವನು. ಆದರೆ ಈ ಗ್ರಂಥವು ಈವರೆಗೆ ಸಂಪೂರ್ಣವಾಗಿ ದೊರೆತಿಲ್ಲ. ಇವನ ಬಾಣಾಸುರವಿಜಯ ವಂತೂ ಸಿಕ್ಕಿಯೇ ಇಲ್ಲ.

ಈತನ ಕೃತಿಯಾದ ನಳಚಂಪುವಿನ ಓಲೆಯ ಪ್ರತಿಯು ಕ್ರಿಸ್ತಾಬ್ದ ೧೯೨೮ರಲ್ಲಿ ಒಂದೇ ಒಂದು ಸಿಕ್ಕಿತು. ಈ ಪ್ರತಿಯನ್ನನುಸರಿಸಿ ಈಗ

ಈ ಕಾವ್ಯವನ್ನು ಮುದ್ರಿಸಿ ಪ್ರಕಾಶಪಡಿಸಿದೆ. ಈ ಓಲೆಯ ಪ್ರತಿಯಲ್ಲಿ ಒಟ್ಟು ೩೬ ಪತ್ರಗಳಿವೆ. ಪ್ರತಿಯೊಂದು ಪುಟದಲ್ಲಿಯೂ ೮–೧೦ ಪಙ್ತ್ತಿಗಳಿವೆ. ಒಂದೆರಡು ಓಲೆಗಳ ತುದಿಯು ಮುರಿದುಹೋಗಿದೆ. ಬರವಣಿಗೆಯು ಸ್ಫುಟವಾಗಿದ್ದರೂ ಅಲ್ಲಲ್ಲಿ ಅಕ್ಷರಲೋಪಗಳಿವೆ. ಹೀಗೆ ಬಿಟ್ಟುಹೋಗಿರುವ ಅಕ್ಷರಗಳನ್ನು ಕಂಸದಲ್ಲಿ ತೋರಿಸಿದೆ. ಮಾತೃಕೆಯಲ್ಲಿರುವ ಪಾಠವು ಅರ್ಥವಾಗದಿದ್ದರೆ, ಅದನ್ನು ಅರ್ಥವಾಗುವಂತೆ ತಿದ್ದಿ ಮಾತೃಕೆಯ ಪಾಠವನ್ನು ಪುಟದ ಅಡಿಯಲ್ಲಿ ಕೊಟ್ಟಿದೆ. ಅರ್ಥಪುಷ್ಟಿಕರವೆಂದು ಕಂಡುಬಂದ ಕೆಲವು ಪಾಠಗಳನ್ನು ಸೂಚಿತ ಪಾಠವೆಂದು ಒಂದು ಕಡೆ ಸಂಗ್ರಹಿಸಿ ಕೊಟ್ಟಿದೆ. ಮೂಲಪ್ರತಿಯಲ್ಲಿ ಶಕಟರೇಫದ ಪ್ರಯೋಗವಿದ್ದರೂ ಅದು ಅನೇಕ ಕಡೆ ಸರಿಯಾಗಿಲ್ಲ. ಅದನ್ನು ಸರಿಪಡಿಸಿದೆ. 'ಱ' ಪ್ರಯೋಗವು ಮಾತೃಕೆಯಲ್ಲಿಲ್ಲ. ಆದರೆ ಕವಿಯ ಕಾಲದಲ್ಲಿ ಇದು ಬಳಕೆಯಲ್ಲಿದ್ದಿರಬೇಕೆಂದು ಇದನ್ನು ಅಚ್ಚಿನ ಪ್ರತಿಯಲ್ಲಿ ಉಪಯೋಗಿಸಿದೆ.

ಚೌಂಡರಸನ ಕಾಲ ದೇಶಾದಿಗಳ ವಿಚಾರವನ್ನು ನಿಷ್ಕೃಷ್ಟವಾಗಿ ತಿಳಿಯಲು ಈ ಕಾವ್ಯವು ಅಷ್ಟು ಸಹಕಾರಿಯಾಗಿಲ್ಲ. ಇವನ ದಶಕುಮಾರ ಚರಿತ್ರೆಯಿಂದ ಈತನ ವಿಚಾರವಾಗಿ ಹೆಚ್ಚು ವಿಷಯಗಳನ್ನು ತಿಳಿಯಬಹುದು. ಇವನನ್ನು ಮತ್ತಾವ ಕವಿಯೂ ತನ್ನ ಗ್ರಂಥದಲ್ಲಿ ಸ್ತುತಿಸಿಲ್ಲ. ಇವನು

'ಪೊಗೞ್ವೆಂ ಲಕ್ಷಣಲಕ್ಷಿತಾದ್ಭುತವಚೋನಿಷ್ಕಂಪನಂ ಪಂಪನಂ
ಜಗತೀಪ್ರೀತಿಕರ ಪ್ರಸಿದ್ಧ ಕವಿತಾಸಂಪನ್ನನಂ ಪೊನ್ನನಂ ।
ಸುಗಮಾರ್ಥಸ್ಫುಟಶಬ್ದಸುಂದರಕಿರದ್ವಾಕ್ಸಾಂದ್ರನಂ ಚಂದ್ರನಂ
ಭಗವದ್ವಿಷ್ಣುಕಥಾವತಾರ ರಚಿತ ಶ್ರೀ ಭದ್ರನಂ ರುದ್ರನಂ ॥'

ಎಂದು ತನಗೆ ಹಿಂದಿದ್ದ ಕವಿಶ್ರೇಷ್ಠರಾದ **ಪಂಪ, ಪೊನ್ನ, ಚಂದ್ರ** ಮತ್ತು **ರುದ್ರಭಟ್ಟ** ಇವರನ್ನು ತನ್ನ ದಶಕುಮಾರ ಚರಿತ್ರೆಯಲ್ಲಿ ಸ್ತುತಿಸಿರುವುದರಿಂದ, ಜಗನ್ನಾಥವಿಜಯವನ್ನು ಬರೆದಿರುವ ರುದ್ರಭಟ್ಟನಿಗಿಂತ ಈಚಿನವನೆಂದು ಸ್ಪಷ್ಟಪಡುತ್ತದೆ. ಕವಿಚರಿತೆಕಾರರು ಮೊದಲು ರುದ್ರಭಟ್ಟನ ಕಾಲವನ್ನು ಸುಮಾರು ಕ್ರಿ. ಶ. ೧೧೮೦[1] ಎಂದು ಊಹಿಸಿ, ಶ್ರೀಮಾನ್ ವೆಂಕಟಸುಬ್ಬಯ್ಯನವರ ವಾದವನ್ನು ಖಂಡನೆಮಾಡುವಾಗ ಆತನು ಸುಮಾರು ಕ್ರಿ. ಶ. ೧೧೮೫[2] ರಲ್ಲಿ ಇದ್ದಿರಬಹುದೆಂದು ಸೂಚಿಸಿರುತ್ತಾರೆ. ಇದರಿಂದಲೇ ಚೌಂಡರಾಜನು ಕ್ರಿ. ಶ. ೧೧೮೫ರ ಮೇಲೆ ಸುಮಾರು ಕ್ರಿ.ಶ. ೧೩೦೦ರಲ್ಲಿ ಇದ್ದಿರಬಹುದೆಂದು ಅವರು ಊಹಿಸಿರುತ್ತಾರೆ[3]. ಆದರೆ

---

[1] ಕವಿಚರಿತೆ, ಸಂ. ೧, ಪುಟ ೨೭೧. [2] ಕವಿಚರಿತೆ, ಸಂ. ೩, ಅವತರಣಿಕೆ
[3] ಕವಿಚರಿತೆ, ಸಂ. ೧, ಪುಟ ೪೦೩.

ಅವರು ಚೌಂಡರಾಜನ ಕಾಲದ ಉತ್ತರಾವಧಿಯನ್ನು ನಿಷ್ಕರ್ಷಿಸಲು ಯಾವ ಕಾರಣವನ್ನೂ ಕೊಟ್ಟಿಲ್ಲ.

ಶ್ರೀ ವರ್ಮಾ ರಾಜಪುರೋಹಿತರು, ಚೌಂಡರಸನ ವಿಚಾರವಾಗಿ ಬರೆದಿರುವ ಲೇಖನದಲ್ಲಿ[1] ಕವಿಯು ಕಾಲದ ಉತ್ತರಾವಧಿಯನ್ನು ಗೊತ್ತು ಮಾಡಲು ಎರಡು ಮುಖ್ಯ ಕಾರಣಗಳನ್ನು ನಿರೂಪಿಸಿರುವರು.

(i) ಚೌಂಡರಾಜನು ಅಭಿನವ ದಶಕುಮಾರಚರಿತ್ರೆಯಲ್ಲಿ ದೇವಗಿರಿ ಯಾದವರ **ಸಿಂಹಣ** ರಾಜನನ್ನು ಸ್ತುತಿಸಿರುವುದು.

(ii) ಪಂಡರಾಪುರದ ವಿಟ್ಠಲದೇವರನ್ನು ಪಾಂಡುರಂಗನೆಂದು ಆತನ ಗ್ರಂಥದಲ್ಲಿ ಸಂಬೋಧಿಸದೆ ಇರುವುದು. ಇವೆರಡರಲ್ಲಿ ಮೊದಲನೆಯ ಕಾರಣವು ಅಷ್ಟು ಯುಕ್ತವಾಗಿ ಕಾಣುವುದಿಲ್ಲ.

ಅಭಿನವ ದಶಕುಮಾರ ಚರಿತ್ರೆಯ ಎಂಟನೆಯ ಆಶ್ವಾಸದಲ್ಲಿರುವ ಅಪಹಾರವರ್ಮನ ಕಥೆಯಲ್ಲಿ 'ಚೇರಂ ವಾರುವಕೋಟಿಯಂ ಗಜಘಟಾ ಸಂತಾನಮಂ ಪಾಂಡ್ಯನೆ' ಲ್ಲಾ ರತ್ನಾಭರಣಂಗಳಂ ಪಡೆದು ಚೋಳಂ **ಸಿಂಹಣಂ ಪದ್ಮಿನೀ ॥ ನಾರೀಸಂತತಿಯಂ** ನಿಜಂ ಕಳಿಪಿದಂ' ಎಂಬ ಪದ್ಯದಲ್ಲಿ, ದಂಡಿಯಿಂದ ವರ್ಣಿಸಲ್ಪಡದ ಚಂಪಾನಗರದ ರಾಜನ ಒಡ್ಡೋಲಗವನ್ನು ವರ್ಣಿಸುವುದಕ್ಕೆ ಉದ್ಯುಕ್ತನಾಗಿ ಚೌಂಡರಾಜನು ತನಗೆ ಸಮಕಾಲೀನರಾದ ಚೇರ, ಪಾಂಡ್ಯ, ಚೋಳ ಮತ್ತು ಸಿಂಹಣ ರಾಜರನ್ನು ಉಲ್ಲೇಖಿಸಿರುವನು. ಇಲ್ಲಿ ಸಿಂಹಣನು ಪದ್ಮಿನೀ ನಾರಿಯರನ್ನು ಕಳುಹಿಸಿದನೆಂದಿರುವುದರಿಂದ ಈತನು ಕರ್ಣಾಟಕ ರಾಜನಾಗಿರಬೇಕು. ಕ್ರಿ. ಶ. ೧೧೮೦ರ ಈಚೆಗೆ ಕರ್ಣಾಟಕ ರಾಜರಲ್ಲಿ ಪ್ರಸಿದ್ಧನಾದ ದೇವಗಿರಿಯಾದವರಲ್ಲಿ ಕ್ರಿ. ಶ. ೧೨೧೦–೧೨೪೭ರ ವರೆಗೆ ಆಳಿದ ಸಿಂಹಣರಾಜನನ್ನು ಕವಿಯು ನಿರ್ದೇಶಿಸಿರುವನೆಂದು ಊಹಿಸಿ, ಚೌಂಡರಾಜನು ಕ್ರಿ. ಶ ೧೨೪೭ರ ಒಳಗೆ ಸುಮಾರು ಕ್ರಿ.ಶ. ೧೨೪೦ರಲ್ಲಿ ಇದ್ದಿರಬೇಕೆಂದು ಶ್ರೀ ವರ್ಮಾ ರಾಜಪುರೋಹಿತರು ವಾದಿಸಿರುವರು; ಆದರೆ ಇಲ್ಲಿ ಕವಿಯು ತನ್ನ ಕಾಲದ ರಾಜನ ಹೆಸರನ್ನು ನಿರ್ದೇಶಿಸಿರುವಂತೆ ತೋರುವುದಿಲ್ಲ. ಚೇರ, ಪಾಂಡ್ಯ, ಚೋಳ ಎಂದು ದೇಶದ ಹೆಸರನ್ನು ಹೇಳಿ ಕೊನೆಯಲ್ಲಿ ಮಾತ್ರ ರಾಜನ ಹೆಸರನ್ನು ಹೇಳಿರುವನೆಂಬುದು ಸರಿಯಲ್ಲ. ಇದೇ ರೀತಿಯಲ್ಲಿ ಈ ಕವಿಯು ನಳಚಂಪುವಿನಲ್ಲಿಯೂ ದಮಯಂತೀಸ್ವಯಂವರಪ್ರಕರಣದಲ್ಲಿ ಭೀಮರಾಜನು ಸೌರಾಷ್ಟ್ರ, **ಕರ್ಣಾಟ**, ಪಾಂಡ್ಯ, ಚೋಳ, **ಸಿಂಹಣಾ**ದಿ ರಾಜರಿಗೆ ಕರೆಯೋಲೆಯನ್ನು ಕಳುಹಿಸಿದನೆಂದು ಹೇಳಿರುವನು [ನ. ಚಂ. ೨೨೪–೨೨೭ ಪದ್ಯಗಳು] ಮತ್ತೆ ಸ್ವಯಂವರ ಮಂಟಪದಲ್ಲಿ ಸಖಿಯು ದಮಯಂತಿಗೆ ರಾಜರನ್ನು

---

[1] **ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ ಸಂಪುಟ ೯, ಸಂಚಿಕೆ ೧, ಪುಟ ೧೯.**

ತೋರಿಸುವಾಗ 'ನೋಡಲೇ ಸತಿ **ಕರ್ಣಾಟ ನೃಪಾಲನಂ**' [ನ. ಚಂ. ಪದ್ಯ ೩೮೪] '**ಈತಂ ಸಿಂಹಮಹೀಪತಿ**' [ನ.ಚಂ. ಪದ್ಯ ೩೮೮] ಎಂದು ಕರ್ಣಾಟ ಮಹೀಪತಿಯಲ್ಲದೆ ಬೇರೊಬ್ಬ ಸಿಂಹಪತಿಯನ್ನೂ ನಿರ್ದೇಶಿಸಿರುವನು. ಇದರಿಂದ ಚೌಂಡರಾಜನು ಪಾಂಡ್ಯ, ಚೋಳ, ಕರ್ಣಾಟ ಮತ್ತು ಸಿಂಹಣ ದೇಶಗಳನ್ನು ನಿರ್ದೇಶಿಸಿರುವನಲ್ಲದೆ ಅವನ ಆಶ್ರಯದಾತನಾದ ರಾಜನ ಹೆಸರನ್ನು ಎಲ್ಲಿಯೂ ಹೇಳಿಲ್ಲ. ಇದರಿಂದ ಈತನ ಕಾಲವನ್ನು ನಿಷ್ಕರ್ಷಿಸಲು ಸಾಧ್ಯವಲ್ಲ.

ಚೌಂಡರಾಜನು ಪಾಂಡುರಂಗಪುರದ ಪ್ರಸಿದ್ಧ ದೇವನಾದ ವಿಟ್ಠಲನನ್ನು ಪಾಂಡುರಂಗನೆಂದು ಸಂಬೋಧಿಸದಿರುವುದು ಆತನ ಕಾಲ ವ್ಯವಸ್ಥೆಗೆ ಒಂದು ಉತ್ತಮ ಸಾಧನವಾಗಿರುವುದು. ದಶಕುಮಾರಚರಿತ್ರೆ ಮತ್ತು ನಳಚಂಪುಗಳಲ್ಲಿ ಕವಿಯು ಅಭಂಗವಿಟ್ಠಲನನ್ನು ಸ್ತುತಿಸಿರುವನು. ಅವನನ್ನು ಎಲ್ಲಿಯೂ ಪಾಂಡುರಂಗನೆಂದು ಸಂಬೋಧಿಸಿಲ್ಲ. ಅಭಿನವ ದಶಕುಮಾರ ಚರಿತ್ರೆಯಲ್ಲಿ ವಿಶ್ರುತನ ಮುಖದಿಂದ ಭೀಮನದೀ ತೀರದಲ್ಲಿರುವ ಪಂಡರಾಪುರ ಕ್ಷೇತ್ರವನ್ನು ಪಾಂಡುರಂಗಪುರವೆಂದು ನಿರ್ದೇಶಿಸಿ ವರ್ಣಿಸಿರುತ್ತಾನೆ. ಇದರಿಂದ ಪಂಡ್ರಾಪುರಕ್ಕೆ ಆಗ ಪಾಂಡುರಂಗವೆಂದು* ಹೆಸರಿತ್ತೆಂದು ಸ್ಪಷ್ಟಪಡುತ್ತದೆ.

---

*ಕ್ರಿ. ಶ. ಏಳನೆಯ ಶತಮಾನದಲ್ಲಿಯೂ ಈ ಗ್ರಾಮಕ್ಕೆ ಇದೇ ಹೆಸರಿತ್ತೆಂದು ಸೋಲಾಪುರ ಜಿಲ್ಲೆಯ ರಾಜನಾಗಿದ್ದ ಅವಿಧೇಯನ ತಾಮ್ರಶಾಸನದಿಂದ ತಿಳಿದು ಬರುತ್ತದೆ. (೧೯೨೯ನೇ ಮೈಸೂರು ಶಾಸನ ಇಲಾಖೆಯ ವರದಿ ಪುಟ ೨೬೨) ಈ ಶಾಸನದಲ್ಲಿ ಭಾರ್ಗವಸ ಗೋತ್ರದ ವಿಟ್ಠನೆಂಬೊಬ್ಬ ಶ್ರೋತ್ರಿಯಬ್ರಾಹ್ಮಣನಿಗೆ ಐದು ಗ್ರಾಮಗಳನ್ನು ದಾನಕೊಟ್ಟುದಾಗಿ ಹೇಳಿದೆ. ಆ ಗ್ರಾಮಗಳಲ್ಲಿ ಪಾಂಡುರಂಗಪಳ್ಳಿಯೆಂಬುದೊಂದು.

ಇಲ್ಲಿ ಬ್ರಾಹ್ಮಣನಿಗೆ ವಿಟ್ಠನೆಂಬ ಹೆಸರಿರುವುದರಿಂದ ವಿಟ್ಠಲದೇವರ ಆರಾಧನೆಯು ಆ ಪ್ರಾಂತದಲ್ಲಿ ಆ ವೇಳೆಗೆ ಪ್ರಸಿದ್ಧವಾಗಿದ್ದಿತೆಂದು ಊಹಿಸಬಹುದಾಗಿದೆ. ಆದರೆ ಪಂಡರಪುರದಲ್ಲಿರುವ ವಿಟ್ಠಲ ವಿಗ್ರಹವನ್ನು ದ್ವಾರಕಿಯಿಂದ ತಂದು ಪ್ರತಿಷ್ಠಿಸಿದುದಾಗಿ ದಂತ ಕಥೆಯಿರುವುದರಿಂದ ರಾಜ ಅವಿಧೇಯನ ಕಾಲದಲ್ಲಿ ಪಾಂಡುರಂಗಪಳ್ಳಿಯಲ್ಲಿ ವಿಟ್ಠಲದೇವರ ಪ್ರತಿಷ್ಠೆಯಾಗಿತ್ತೆಂದು ನಿಷ್ಕೃಷ್ಟವಾಗಿ ಹೇಳಲಾಗುವುದಿಲ್ಲ. ವಿಟ್ಠಲನ ವಿಗ್ರಹವು ಮಾತ್ರ ಬಹಳ ಹಳೆಯದೆಂದೇ ಹೇಳಬಹುದು. ಈ ವಿಗ್ರಹವು ಸೊಂಟದಮೇಲೆ ಕೈಗಳನ್ನು ಇಟ್ಟುಕೊಂಡು ನಿಂತಿದೆ. ಎಡಗೈಯಲ್ಲಿ ಶಂಖವನ್ನೂ ಬಲಗೈಯಲ್ಲಿ ಚಕ್ರವನ್ನೂ ಹಿಡಿದುಕೊಂಡಿರುವಂತಿದೆ. ವಿಗ್ರಹದ ಮೇಲೆ ಬಟ್ಟೆಯಿರುವಂತೆಯೂ ನಡುಕಟ್ಟಿನ ತುದಿಯು ಬಲತೊಡೆಯವರೆಗಿರುವಂತೆಯೂ ಕೆತ್ತಲ್ಪಟ್ಟಿದೆ. ಕಿವಿಯ ಆಭರಣವು ಭುಜವನ್ನು ಮುಟ್ಟಿಕೊಂಡಿದೆ. ಕತ್ತಿನಲ್ಲಿ ಪದಕವೂ ಮತ್ತು ತಲೆಯ ಮೇಲೆ ಕಿರೀಟವೂ ಇದೆ. ವಿಗ್ರಹದ ಉಡುಪು ಮತ್ತು ಆಭರಣಗಳಿಂದ ಇದು ಕ್ರಿ. ಶ. ೫-೬ನೇ ಶತಮಾನಕ್ಕಿಂತ ಹಿಂದಿನದೆಂದು ವ್ಯಕ್ತಪಡುವುದು. [XX ಬೊಂಬಾಯಿ ಗೆಜೆಟಿಯರ್, ಪುಟ ೪೨೩-೪೨೪.]



ಮುಳಬಾಗಿಲಿನಲ್ಲಿರುವ ವಿಟ್ಠಲ ವಿಗ್ರಹ

ನಮ್ಮ ಮೈಸೂರು ಸೀಮೆಯಲ್ಲಿ ಮೂರು ಕಡೆ ವಿಟ್ಠಲನ ಪ್ರತಿಮೆ ಇದೆ. ಆದರೆ ಇದು ಪಂಡರಪುರದ ವಿಟ್ಠಲನನ್ನು ಸಂಪೂರ್ಣವಾಗಿ ಹೋಲುವುದಿಲ್ಲ. ಒಂದೊಂದು ಕಡೆ ಒಂದೊಂದು ರೀತಿಯಲ್ಲಿದೆ.

(i) ಕಡೂರಿನ ಸಿಹಿನೀರು ಹೊಂಡದ ವಾಯುವ್ಯದಲ್ಲಿರುವ ಚೆನ್ನಕೇಶವ ಸ್ವಾಮಿ ದೇವಸ್ಥಾನದೊಳಗೆ ಚೆನ್ನಕೇಶವನ ಒಳಗುಡಿಯ ಎಡಪಾರ್ಶ್ವದಲ್ಲಿರುವ ಸಣ್ಣ ಕೊಠಡಿಯಲ್ಲಿ ಪಂಡರಪುರದ ವಿಟ್ಠಲನನ್ನು ಹೋಲುವ ವಿಟ್ಠಲ ವಿಗ್ರಹವಿರುವುದು. ಆದರೆ ಈ ವಿಗ್ರಹದ ಬಲಗೈಯಲ್ಲಿ ಶಂಖವಿದೆ. ಪ್ರತಿಮೆಯು ಸುಮಾರು ೧೬ನೇ ಶತಮಾನದ್ದೆಂದು ತಿಳಿದುಬರುವುದು. (೧೯೪೫ನೇ ಮೈಸೂರು ಶಾಸನ ಇಲಾಖಾ ವರದಿ, ಪುಟ ೨೭).

(ii) ಕೋಲಾರ ಡಿಸ್ಟ್ರಿಕ್ಟಿನ ಮುಳಬಾಗಿಲಿನಲ್ಲಿ ಸುಮಾರು ೧೬ನೇ ಶತಮಾನದ ಮಧ್ಯದಲ್ಲಿ ವಿಜಯನಗರದರಸರಿಂದ ನಿರ್ಮಿಸಲ್ಪಟ್ಟ ವಿಟ್ಠಲದೇವಾಲಯವಿರುವುದು. ಈ ದೇವಾಲಯದಲ್ಲಿರುವ ವಿಟ್ಠಲ ವಿಗ್ರಹವು ಬೆತ್ತಲೆಯಾಗಿ ನಿಂತಿದೆ. ಎಡಗೈಯು ಶಂಖದಿಂದ ಕೂಡಿ ಸೊಂಟದ ಮೇಲಿದೆ. ಬಲಗೈಯು ದಾನ ಮುದ್ರೆಯಲ್ಲಿದೆ. (೧೯೪೫ನೇ ಮೈಸೂರು ಶಾಸನ ಇಲಾಖಾ ವರದಿ, ಪುಟ ೩೭).

(iii) ಬೆಂಗಳೂರು ಡಿಸ್ಟ್ರಿಕ್ಟಿನ ಹೊಸಕೋಟೆಯ ವಿಟ್ಠಲ ದೇವಾಲಯದಲ್ಲಿ ಸುಮಾರು ಮೂರು ಅಡಿ ಎತ್ತರದ ವಿಟ್ಠಲ ದೇವರ ಒಂದು ಕಲ್ಲಿನ ವಿಗ್ರಹವಿದೆ. ಇಲ್ಲಿಯೂ ಪಂಡರಾಪುರದಲ್ಲಿರುವಂತೆ ಎರಡು ಕೈಗಳೂ ವಿಗ್ರಹದ ಸೊಂಟದ ಮೇಲಿವೆ. ಇದಕ್ಕೆ ಪ್ರಭಾವಳಿ ಇದೆ. [೧೯೧೯ನೇ ಮೈಸೂರು ಶಾಸನ ಇಲಾಖಾ ವರದಿ, ಪುಟ ೫].

ವಿಟ್ಠಲನನ್ನು ಕೃಷ್ಣನೆಂದು ಎಲ್ಲರೂ ಒಪ್ಪಿರುತ್ತಾರೆ. ಪಂಡರಪುರದಲ್ಲಿ ವಿಟ್ಠಲನ ದೇವಿಯಾದ ರಖುಮಾಯಿಯ ಅಥವಾ ರುಕ್ಮಿಣಿಯ ಮತ್ತು ಸತ್ಯಭಾಮೆ ರಾಧೆಯರ ವಿಗ್ರಹಗಳಿದ್ದು ಅವುಗಳ ಪೂಜೆ ನಡೆಯುತ್ತಿರುವುದೂ ಈ ಅಭಿಪ್ರಾಯವನ್ನು ಪುಷ್ಟೀಕರಿಸುತ್ತದೆ.

ವಿಟ್ಠಲನೆಂಬ ಹೆಸರು ದೇವರಿಗೆ ಹೇಗೆ ಬಂದಿತೆಂದು ಮಹಾರಾಷ್ಟ್ರ ಪಂಡಿತರಲ್ಲೇ ದೊಡ್ಡ ಚರ್ಚೆ ನಡೆದಿದೆ. ಶ್ರೀಮಾನ್ ಆರ್. ಜಿ. ಭಂಡಾರಕರ್ ರವರು ಕೃಷ್ಣ ಎಂಬ ಸಂಸ್ಕೃತ ಪದವು ಕಿಟ್ಟು, ಕಿಟ್ಟ ಎಂದು ಕನ್ನಡದಲ್ಲಿ ಬಳಕೆಯಿರುವಂತೆ, ಸಂಸ್ಕೃತದ ವಿಷ್ಣು ಎಂಬ ಪದವು ಕನ್ನಡದಲ್ಲಿ ವಿಟ್ಟು-ವಿಟ್ಠ ಎಂದಾಗಿ, ಅದಕ್ಕೆ ಪ್ರೀತಿವಾಚಕವಾದ 'ಲ' ಎಂಬುದು ಹೇಗೋ ಸೇರಿಹೋಗಿರಬೇಕೆಂದು ಅಭಿಪ್ರಾಯಪಟ್ಟಿರುವರು. ಮತ್ತೆ ಕೆಲವರು ಈ ದೇವರು ಇಟ್ಟಿಗೆಯ ಮೇಲೆ ನಿಂತಿರುವುದರಿಂದಲೂ ಮಹಾರಾಷ್ಟ್ರದಲ್ಲಿ ಇಟ್ಟಿಗೆಗೆ ವಿಟೆ ಎಂದಿರುವುದರಿಂದಲೂ ಈ ದೇವರಿಗೆ ವಿಟ್ಠಲನೆಂಬ ಹೆಸರು ಬಂದಿತೆಂದು ಹೇಳುವರು. ಇದಕ್ಕೆ ಉಪಷ್ಟಂಭಕವಾಗಿ ಪಂಡರಪುರದಲ್ಲಿ ಅನನ್ಯಮನಸ್ಕನಾಗಿ ಮಾತಾಪಿತೃಸೇವೆಯಲ್ಲಿ ಅತ್ಯಂತ ನಿರತನಾಗಿದ್ದ ಪುಂಡಲೀಕನೆಂಬೊಬ್ಬ ಭಕ್ತಶ್ರೇಷ್ಠನ ಭಕ್ತಿಗೆ ಮೆಚ್ಚಿ ರುಕ್ಮಿಣೀದೇವಿಯು ದ್ವಾರಕೆಯನ್ನು ಬಿಟ್ಟು ಇಲ್ಲಿಗೆ ಬಂದುದಾಗಿಯೂ ಆಗ ಶ್ರೀ ಕೃಷ್ಣನು ತನ್ನ ರಾಣಿಯನ್ನು ಅರಸಿಕೊಂಡು ಈ ಕ್ಷೇತ್ರಕ್ಕೆ ಬಂದಾಗ ಜನಕಜನನಿಯರ ಸೇವೆಯಲ್ಲಿದ್ದ ಪುಂಡಲೀಕನು ತಾನಿದ್ದ ಸ್ಥಳದಿಂದಲೇ ಒಂದು ಇಟ್ಟಿಗೆಯನ್ನು ಎಸೆದು ಅದರ ಮೇಲೆ ಕೃಷ್ಣನನ್ನು ನಿಂತುಕೊಂಡಿರುವಂತೆ ಪ್ರಾರ್ಥಿಸಿದನೆಂದೂ ಒಂದು ಕಥೆ ಇರುತ್ತದೆ.

ಕ್ರಿ. ಶ. ೧೨೭೦ರಲ್ಲಿ ಕೇಶವನ ಮಗನಾದ ಭಾನು ಎಂಬ ಬ್ರಾಹ್ಮಣನು ಪಾಂಡುರಂಗಪುರದಲ್ಲಿ ಅಪ್ತೋರ್ಯಾಮವೆಂಬ ಯಜ್ಞವನ್ನು ಮಾಡಿ ವಿಟ್ಠಲ ಮೊದಲಾದ ದೇವರನ್ನೂ ಬ್ರಾಹ್ಮಣರನ್ನೂ ತೃಪ್ತಿಪಡಿಸಿದ ನೆಂದು ಪಂಡರಾಪುರದ ಜಿಲ್ಲೆಯ ಒಂದು ಶಾಸನವು ಹೇಳುತ್ತದೆ. ಆದುದರಿಂದ ಈವರೆಗೆ ಪಾಂಡುರಂಗಪುರದಲ್ಲಿ ವಿಟ್ಠಲದೇವರಿದ್ದರೂ ದೇವರನ್ನು ಪಾಂಡುರಂಗನೆಂದು ಸಂಬೋಧಿಸಿರುವುದಿಲ್ಲ. ಹದಿಮೂರ ನೆಯ ಶತಮಾನದ ಕೊನೆಯಲ್ಲಿದ್ದ ಮಹಾರಾಷ್ಟ್ರ ಸಾಧುಸಂತರಾದ ಜ್ಞಾನದೇವ, ನಾಮದೇವ ಮೊದಲಾದವರು ಪಾಂಡುರಂಗ ಕ್ಷೇತ್ರಸ್ವಾಮಿ ಯಾದ ವಿಟ್ಠಲನನ್ನು ಪಾಂಡುರಂಗನೆಂದು ಸ್ತುತಿಸಿರುವರು. ಆದುದರಿಂದ ಚೌಂಡರಾಜನು ಕ್ರಿ. ಶ. ೧೨೭೦ಕ್ಕೆ ಹಿಂದೆ ಇದ್ದಿರಬೇಕೆಂದು ಊಹಿಸ ಬಹುದಾಗಿದೆ.

ಈ ಊಹೆಯನ್ನು ದೃಢೀಕರಿಸಿ ಚೌಂಡರಸನ ಕಾಲದ ಉತ್ತರಾವಧಿ ಯನ್ನು ನಿಷ್ಕರ್ಷಿಸಲು ನಳಚಂಪ್ರುವಿನಲ್ಲಿರುವ ಕೆಲವು ಪದ್ಯಗಳು ಮಲ್ಲಿ ಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ ಸಂಕಲಿತವಾಗಿರುವುದು ವಿಶೇಷ ಸಹಕಾರಿಯಾಗಿರುತ್ತದೆ. ಭೋಜನ ಕೂಟವನ್ನು ವರ್ಣಿಸುವಾಗ ಚೌಂಡ ರಾಜನು ಉಪ್ಪಿನಕಾಯಿಯ ಭೇದಗಳನ್ನು ಎರಡು ಪದ್ಯಗಳಲ್ಲಿ ವರ್ಣಿ ಸಿರುವನು.

(i) 'ಗಾವಟೆ ಬೆಲ್ಲವತ್ತವರೆಮಾದಲವಂಬಟೆ' [ಪದ್ಯ ೪೬೨]

(ii) 'ನಳನಳಿಸುವ ಮೆಣಸಿನಕರೆ' [ಪದ್ಯ ೪೬೩]

ಹೀಗೆಯೇ ಸೂಕ್ತಿಸುಧಾರ್ಣವದ ಕೆಲವು ಪ್ರತಿಗಳಲ್ಲಿ ಈತನ ಅಭಿನವ ದಶಕುಮಾರಚರಿತೆಯಿಂದಲೂ ಪದ್ಯಗಳನ್ನು ಉದ್ಧರಿಸಿರುವುದು

---

ಈ ಎರಡು ಅಭಿಪ್ರಾಯಗಳಲ್ಲೂ ವಿಟ್ಠಲನು ಶ್ರೀಕೃಷ್ಣನೇ. ಇದರಲ್ಲಿ ಮೊದಲಿನ ಅಭಿಪ್ರಾಯವು ಸಾಧುವಾಗಿರುವುದಲ್ಲದೆ ಈ ವಿಟ್ಠಲ ಕ್ಷೇತ್ರವಾದ ಪಾಂಡುರಂಗಪುರವು ಕನ್ನಡ ಪ್ರಾಂತವಾಗಿತ್ತೆಂಬುದನ್ನು ಪುಷ್ಟೀಕರಿಸುತ್ತದೆ. ವಿಟ್ಠಲನ ಭಕ್ತರಾದ ಜ್ಞಾನದೇವ ನಾಮದೇವರೆಂಬ ಮಹಾರಾಷ್ಟ್ರ ಸಾಧುಗ ಳಿಬ್ಬರೂ ಪಂಡರಪುರವು ಕರ್ಣಾಟಕದೇಶದಲ್ಲಿ ಒಂದು ವಿಷ್ಣುಕ್ಷೇತ್ರವಾಗಿತ್ತೆಂದು:

(i) ಕಾನಡಾ ಹೋ ವಿಟ್ಠಲು ಕರ್ಣಾಟಕು । ತ್ಯಾನೇ ಮಜ ಲಾವಿಲಾವೇಧು ॥ (ಜ್ಞಾನದೇವ ಗಾಥಾ ಅಭಂಗ ೭೬೪) ಕರ್ಣಾಟಕ ದೇಶದಲ್ಲಿಯ ವಿಟ್ಠಲದೇವನು ತನ್ನ ಕಡೆಗೆ ನನ್ನ ಮನಸ್ಸನ್ನು ಆಕರ್ಷಿಸಿಕೊಂಡನು.

(ii) "ಕಾಶಿಯೇ ಕನೋಜಾ ದ್ವಾರಕೇ ಗುಜರು । ಕಾನಡಾ ವಿಟ್ಠಲ ಪಂಢರೀಯೇ" ನಾಮದೇವಗಾಥಾ ಅಭಂಗ ೫೩೮-೧ [ಕನೋಜ ಪ್ರಾಂತದಲ್ಲಿ ಹೇಗೆ ಕಾಶೀಕ್ಷೇತ್ರವೋ ಗುಜರಾತ ಪ್ರಾಂತದಲ್ಲಿ ಹೇಗೆ ದ್ವಾರಕಾ ಕ್ಷೇತ್ರವೋ ಹಾಗೆ ಕರ್ಣಾಟಕ ಪ್ರಾಂತದಲ್ಲಿ ವಿಟ್ಠಲ ದೇವನ ಪಂಡರೀ ಕ್ಷೇತ್ರವು] ಎಂಬ ಗಾಥೆಗಳಲ್ಲಿ ಘಂಟಾಘೋಷವಾಗಿ ಹೇಳಿರುತ್ತಾರೆ.

ಕಂಡುಬರುತ್ತದೆ. [1] ಉದಾಹರಣೆಗೆ 'ಪದಪಿಂದಂಬರಲಕ್ಷ್ಮಿಯೆಚ್ಚಿಕೊಳ ಲೆಂದೌತ್ಸುಕ್ಯದಿಂ ಕಜ್ಜಳಂ' [ಅಭಿನವ ದಶಕುಮಾರಚರಿತೆ ಆಶ್ವಾಸ ೩ ಪದ್ಯ ೩೩] ಈ ಪದ್ಯಗಳು ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ ಸಂಕಲಿತವಾಗಿವೆ. ಇವು ಆ ಕಾವ್ಯಗಳಲ್ಲಿರುವ ಇತರ ಪದ್ಯಗಳಂತೆ ಇವ ನಿಂದಲೇ ರಚಿತವಾದುವೆಂದು ಒಪ್ಪಬೇಕು. ಆದುದರಿಂದ ಚೌಂಡ ರಾಜನು ಮಲ್ಲಿಕಾರ್ಜುನನಿಗಿಂತ ಹಿಂದಿನವನೆಂದೇ ಹೇಳಬೇಕು. ಮಲ್ಲಿ ಕಾರ್ಜುನನ ಕಾಲವನ್ನು ಕವಿಚರಿತೆಕಾರರು [2]ಸು. ೧೨೪೫ ಅಥವಾ [3]ಆ ಕಾಲಕ್ಕಿಂತ ಇನ್ನೂ ಕೆಲವು ವರ್ಷಗಳು ಮೊದಲು ಎಂದೂ [4]ಡಾ|| ಕೃಷ್ಣ ಮತ್ತು [5]ಶ್ರೀಮಾನ್ ಅನಂತರಂಗಾಚಾರ್ಯರು ಸು. ೧೨೪೦ ಎಂದೂ ಸಮರ್ಥಿಸಿರುವರು. ಈ ಕಾರಣಗಳಿಂದ ಚೌಂಡ ರಾಜನು ರುದ್ರಭಟ್ಟನಿಗಿಂತ ಈಚೆ ಮಲ್ಲಿಕಾರ್ಜುನನಿಗಿಂತ ಹಿಂದೆ ಅಂದರೆ ೧೧೮೫ರ ಮೇಲೆ ೧೨೪೦ ರೊಳಗೆ ಇದ್ದಿರಬೇಕೆಂದು ಹೇಳಬಹುದು.

ಕವಿಯು ನಳಚಂಪುವಿನ ಆರಂಭದಲ್ಲಿ 'ಪೊರೆಗೆ ಮಂಗಳ ಮೂರ್ತಿಯಭಂಗವಿಟ್ಠಲಂ' ಎಂದೂ ದಶಕುಮಾರ ಚರಿತ್ರೆಯಲ್ಲಿ 'ವಿಟ್ಠಲ ಪದಾಂಭೋಜಾತಭೃಂಗಂ' ಎಂದೂ ತನ್ನ ಕುಲದೈವವಾದ ಅಭಂಗವಿಟ್ಠಲನನ್ನು ಸ್ತುತಿಸಿರುವನು; ಮತ್ತು ಅದೇ ದಶಕುಮಾರ ಚರಿತ್ರೆಯ ೧೪ನೆಯ ಆಶ್ವಾಸದಲ್ಲಿ ವಿಟ್ಠಲಸ್ತೋತ್ರವನ್ನು ಕಥಾನಾಯಕ ನಿಂದ ಮಾಡಿಸಿ ಪಂಢರಪುರದ ದೇವಾಲಯವನ್ನು ವರ್ಣಿಸಿರುವನು. ಇವುಗಳಿಂದ ಚೌಂಡರಸನು ವಿಷ್ಣುಭಕ್ತನೆಂದೂ ಸೋಲಾಪುರ ಪ್ರಾಂತ ವಾಸಿಯೆಂದೂ ಊಹಿಸಬಹುದಾಗಿದೆ. ಈ ಕವಿಯು ಬ್ರಾಹ್ಮಣನೆಂದು ಕವಿಚರಿತ್ರೆಕಾರರೂ ಶ್ರೀವೈಷ್ಣವಬ್ರಾಹ್ಮಣನೆಂದು ಶ್ರೀ| ರಾಜಪುರೋ ಹಿತರೂ ಹೇಳಿರುವರು. ಈತನು ತನ್ನ ದಶಕುಮಾರ ಚರಿತ್ರೆಯಲ್ಲಿ ದ್ವಿಜವಂಶೋದ್ಭವನೆಂದು ಹೇಳಿಕೊಂಡಿರುವನು. ನಳಚಂಪುವಿನಲ್ಲಿ 'ದ್ವಿಜರಂ ಪಾಲಿಸುವುದು ಭೂಭುಜರ್ಗೆ ಗುಣಂ' [ಪದ್ಯ ೧೦೭] 'ತುಪ್ಪವೇಂ ಸೊಗಸದೆ ಸದ್ದ್ವಿಜರ್ಗೆಬಲೆ' [ಪದ್ಯ ೪೫೦] 'ದ್ವಿಜ ನಿಕರಂ ಧೌತವನಕ್ಕಜದಿಂ ಮೇಲ್ವಡಿದು ಪೋಪತೆಱದಿಂ' [ಪದ್ಯ ೫೨೯] 'ದ್ವಿಜಸಂತತಿ ಮುಕ್ತಾಭಾನಿಜಾಶ್ರಿತಸ್ಥಿತಿಯಿನಿರ್ಪವೊಲ್' [ಪದ್ಯ ೭೧೭] ಎಂದು ದ್ವಿಜಶಬ್ದವನ್ನು ಬ್ರಾಹ್ಮಣವಾಚಕವಾಗಿಯೇ ಪ್ರಯೋಗಿಸಿರುವನು.

---

[1] ಚೌಂಡರಸನ ಕಾಲ ವಿಚಾರ (ಶ್ರೀ. ಡಿ. ಎಲ್. ನರಸಿಂಹಾಚಾರ್) ಜಯಕರ್ಣಾಟಕ ಸಂಪುಟ ೮. [2] ಕ. ಚ. ಸಂ. ೧, ಪುಟ ೩೭೯. [3] ಕ. ಚ. ಸಂ. ೩, ಪೀಠಿಕೆ lix, 3. [4] ಮೈಸೂರು ಶಾಸನ ಇಲಾಖೆಯ ವರದಿ ೧೯೩೧. [5] ಸೂಕ್ತಿಸುಧಾರ್ಣವ, ಪೀಠಿಕೆ xvii.

ಇದರಿಂದ **ಚಾಂಡನು*** ಬ್ರಾಹ್ಮಣನೆಂದು ಹೇಳುವುದು ಸಾಧುವಾಗಿದೆ. 'ರಾಜ' 'ಅರಸು' ಎಂಬುದು ಆತನ ಮನೆತನಕ್ಕೆ ಬಂದ ಹೆಸರಿರ ಬಹುದು.

ಈ ಕವಿಯು ಭರದ್ವಾಜ ಗೋತ್ರದವನು. ಈತನ ತಂದೆ ಮಧು ಸೂದನ. ತಾಯಿ ಮಲ್ಲವ್ವೆ. ಹೆಂಡತಿ ಲಕ್ಷ್ಮಿ. ಅಣ್ಣ ಸರಸಕವೀಶ್ವರ. ಇವನಿಗೆ 'ಕವಿತಾವಿಲಾಸ' 'ಕವಿರಾಜಶೇಖರ' ಮತ್ತು 'ಕರ್ಣಾಟ ವಂಶ ಶೃಂಗಾರ ರಸ' ಎಂಬ ಬಿರುದುಗಳಿದ್ದುವು. ಇವೆಲ್ಲವನ್ನೂ ಈತನ ದಶಕುಮಾರ ಚರಿತ್ರೆಯಲ್ಲಿರುವ ಈ ಎರಡು ಪದ್ಯಗಳಿಂದ ತಿಳಿಯ ಬಹುದು.

'ದ್ವಿಜವಂಶಾಂಬುಧಿಪೂರ್ಣಚಂದ್ರನಸಮಖ್ಯಾತಂ ಭರದ್ವಾಜ ಗೋ
ತ್ರಜನುದ್ದಂಡಮನೋಹರಪ್ರಚುರಶಿಷ್ಯಂ ದಾನಕಲ್ಪದ್ರುಮಂ ।
ತ್ರಿಜಗನ್ಮಂಗಳಮೂರ್ತಿ ವಿಟ್ಠಲಪದಾಂಭೋಜಾತಭೃಂಗಂ ಗುಣ
ವ್ರಜಯುಕ್ತಂ ಕವಿತಾವಿಳಾಸನೆನಿಪಂ ಚಾಂಡಂ ದಯಾಮಂಡನಂ ॥

ವರಮಧುಸೂದನಂ ಜನಕನೊಪ್ಪುವ ಮಲ್ಲವೆ ಮಾತೆಯಗ್ರಜಂ
ಸರಸಕವೀಶ್ವರಂ ತನಗೆ ವಲ್ಲಭೆ ಲಕ್ಷ್ಮಿಯೆನಿಪ್ಪ ಪೆಂಪು ಬಿ ।
ತ್ತರಿಸುವೊಡಗ್ಗಳಂ ನಿಜಮೆನಲ್ ಮೆಱೆವಂ ಹರಿಪಾದಶೋಣಪಂ
ಕರುಹಮಧುವ್ರತಂ ಸುಕವಿ ಚಾಂಡರಸಂ ಕವಿರಾಜಶೇಖರಂ ॥ '

ಸಂಸ್ಕೃತಕವಿಯಾದ ದಂಡಿಯು ದಶಕುಮಾರಚರಿತ್ರೆಯನ್ನು ಗದ್ಯ ರೂಪದಲ್ಲಿ ಬರೆದನು. ಆದರೆ ಚಾಂಡರಸನು ಅಭಿನವದಶಕುಮಾರ ಚರಿತ್ರೆಯನ್ನು ಗದ್ಯಪದ್ಯಾತ್ಮಕವಾದ ಚಂಪೂರೂಪದಲ್ಲಿ ಬರೆದಿರುವನು. ಹೀಗೆಯೇ ಮಹಾಭಾರತಕ್ಕೆ ಸೇರಿದ ಉಪಾಖ್ಯಾನಗಳಲ್ಲಿ ಸುಪ್ರಸಿದ್ಧವಾದ ಮತ್ತು ರಸಾತ್ಮಕವಾದ ನಳೋಪಾಖ್ಯಾನವನ್ನು ಅಲ್ಲಿ ಇಲ್ಲಿ ವ್ಯತ್ಯಾಸಮಾಡಿ ಚಂಪೂರೂಪದಲ್ಲಿ ಬರೆದಿರುವನು. ಇದರಿಂದ ಚಂಪೂಕಾವ್ಯದಲ್ಲಿ ಈತನಿಗೆ ಹೆಚ್ಚು ಅಭಿರುಚಿಯಿದ್ದಿರಬಹುದೆಂದು ಅಥವಾ ಈತನ ಕಾಲದಲ್ಲಿ ಚಂಪೂ ಕಾವ್ಯವನ್ನು ಬರೆದರೆ ಕವಿಗೆ ಹೆಚ್ಚು ಗೌರವ ಸಲ್ಲುತ್ತಿತ್ತೆಂದು ಊಹಿಸ ಬಹುದು.

ಪ್ರಕೃತ ಈ ಗ್ರಂಥಕ್ಕೆ ಚಂಪುವೆಂದು ಹೆಸರಿಟ್ಟಿದ್ದರೂ ಇದರಲ್ಲಿ ಗದ್ಯ ಕ್ಕಿಂತ ಪದ್ಯವೇ ಹೆಚ್ಚು. ಇಲ್ಲಿ ೭೭೫ ಪದ್ಯಗಳೂ ೪ ಗದ್ಯಗಳೂ ಮಧ್ಯೆ ಮಧ್ಯೆ ಸಣ್ಣ ಸಣ್ಣ ವಚನಗಳೂ ಇವೆ. ಪದ್ಯಗಳಲ್ಲಿ ದಮಯಂತಿಯ ವಿರಹ ತಾಪ ಮತ್ತು ಗಣಪತಿಯ ಸ್ತೋತ್ರ ಇವುಗಳನ್ನು ಲಲಿತರಗಳೆಯಲ್ಲೂ

---

* ಈ ಕವಿಯು ತನ್ನನ್ನು ಚಾಂಡನೆಂದು ದಶಕುಮಾರ ಚರಿತ್ರೆ ಆಶ್ವಾಸ ೧ ಪದ್ಯ ೧೩ರಲ್ಲಿ ಹೇಳಿಕೊಂಡಿರುವನು.

ಉಳಿದ ಭಾಗಗಳನ್ನು ಕಂದ, ಉತ್ಪಲಮಾಲೆ, ಮತ್ತೇಭವಿಕ್ರೀಡಿತ, ಸ್ರಗ್ಧರೆ, ಮಹಾಸ್ರಗ್ಧರೆ ಈ ವೃತ್ತಗಳಲ್ಲಿಯೂ ಳಲಂ ನೆಯ ಪದ್ಯವನ್ನು ತರಳ ವೃತ್ತದಲ್ಲಿಯೂ ಕವಿಯು ರಚಿಸಿರುವನು. ದಶಕುಮಾರ ಚರಿತ್ರೆಯಲ್ಲಿರುವಂತೆ ಈ ಗ್ರಂಥದಲ್ಲಿ ಆಶ್ವಾಸಾದಿ ವಿಭಾಗಗಳಿಲ್ಲ. ಈ ಕೃತಿಯಲ್ಲಿ ಭಾರತದ ಕಥೆಯ ಸಾರಾಂಶವನ್ನೇ ವಸ್ತುವಾಗಿಟ್ಟುಕೊಂಡು ಕವಿಯು ತನಗೆ ಬೇಕಾದಂತೆ ಮಾರ್ಪಾಟುಮಾಡಿ, ಕಥಾಭಾಗಕ್ಕಿಂತ ವರ್ಣನೆಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟಿರುವನು. ಗ್ರಂಥದ ಆರಂಭದಲ್ಲಿ ಅಭಂಗವಿಟ್ಠಲ, ಶಿವ, ಗಣಪತಿ, ಬನಶಂಕರಿ ಇವರನ್ನು ಸ್ತುತಿಸಿ ಕಾವ್ಯಾಭಿಮಾನಿಗಳಾದ ಸಹೃದಯರಿಗೆ ಕವಿಯು ನಮಸ್ಕರಿಸುವನು ; ಅನಂತರ "ಲೋಕಮನುಙೆ ಮೆಚ್ಚಿಸಲ್ ಗಿರಿಶನಾರ್ಪನೆ" "ದುರ್ಜನಂಗೆ ಪರಿಶಂಕಿಸಲೇಕೆ ದುರುಕ್ತಿಭೀತಿಯಿಂ" ಎಂದು ಲೋಕವನ್ನು ಮೆಚ್ಚಿಸಲು ಹರಿಹರಾದಿಗಳಿಗೂ ಸಾಧ್ಯವಿಲ್ಲವೆಂದೂ ದುರ್ಜನರ ಮಾತಿಗೆ ಭಯಪಟ್ಟು ಸತ್ಕಾವ್ಯವನ್ನು ಬರೆಯದೆ ಬಿಡುವುದು ಹೇಡಿತನವೆಂದೂ ನಿಶ್ಚಯಿಸಿ ಈ ಪರಮಪವಿತ್ರವಾದ ಕಲ್ಯಾಣನಳಚರಿತ್ರೆಯನ್ನು ಬರೆಯುವುದಾಗಿ ಪ್ರತಿಜ್ಞೆಮಾಡಿರುವನು. ದಮಯಂತಿಯು ನಳನನ್ನು ವರಿಸಿ ಮದುವೆಯಾದುದರಲ್ಲಿಯೂ ಕಾಡಿನಲ್ಲಿ ಅಗಲಿದ ಅವರಿಬ್ಬರೂ ಪುನಃ ಸೇರಿ ಸುಖದಿಂದಿರುವುದರಲ್ಲಿಯೂ ಕವಿಗೆ ಹೆಚ್ಚು ದೃಷ್ಟಿ. ಇದೊಂದು ಕಲ್ಯಾಣ ನಳಖ್ಯಾತ ಪುಣ್ಯಚರಿತ್ರೆ. ಇದನ್ನು ಕೇಳಿದವರಿಗೆ ಮತ್ತು ಓದಿದವರಿಗೆ ಸದ್ಗತಿಯುಂಟು ಎಂದು ಕಾವ್ಯದ ಕೊನೆಯಲ್ಲಿರುವ

" ಈ ಕೃತಿಯಂ ಮನಂಬಯಸಿ ಕೇಳ್ವ ಜನರ್ಗೆ ಸಮಸ್ತ ಶಾಶ್ವತ
ಶ್ರೀಕೃಪೆ ಪಿಂಗದಿರ್ಕೆ ಸತತಂ ಪರಮೋತ್ಸವ ನಿತ್ಯವೈಭವ ।
ಶ್ರೀಕೃತದೇಡ್ಗ ರಂಜಿಸುಗೆ ಕಲ್ಪಶತಂ ಕಲಿಪೊರ್ದದಿರ್ಕೆ ಶೋ
ಭಾಕೃತಿಯೊಂದಿ ನಿಲ್ಕೆ ಧರೆ ಮೇರು ಮಹೀಧರವೊಪ್ಪುತಿರ್ಪಿನಂ ॥ "

ಎಂಬ ಪದ್ಯದಲ್ಲಿ ತಿಳಿಸಿರುವನು.

ಸಂಸ್ಕೃತ ಮಹಾಭಾರತದಲ್ಲಿರುವ ನಲೋಪಾಖ್ಯಾನವು ಲೋಕಪ್ರಸಿದ್ಧವಾದುದು. ಇದನ್ನು ಆಧಾರವಾಗಿಟ್ಟುಕೊಂಡು ಅನೇಕ ಉದ್ದಾಮ ಕವಿಗಳು ಉತ್ಕೃಷ್ಟಗ್ರಂಥಗಳನ್ನು ರಚಿಸಿರುತ್ತಾರೆ. ಈ ಪುಸ್ತಕದ ಕೊನೆಯಲ್ಲಿ ಅನುಬಂಧವಾಗಿ ಕೊಟ್ಟಿರುವ ಗ್ರಂಥಗಳ ಪಟ್ಟಿಯಿಂದಲೇ ನಳದಮಯಂತಿಯರ ವಿಚಾರವಾಗಿ ಎಷ್ಟು ಗ್ರಂಥಗಳು ಯಾವ ಯಾವ ಭಾಷೆಗಳಲ್ಲಿ ಹೊರಟಿವೆ ಎಂಬುದು ಸ್ಪಷ್ಟವಾಗುತ್ತದೆ. ಸಂಸ್ಕೃತ, ಪ್ರಾಕೃತ, ತಮಿಳು, ಕನ್ನಡ ಮುಂತಾದ ಭಾಷೆಗಳಲ್ಲಲ್ಲದೆ ಇನ್ನೂ ಇತರ ಪೌರಸ್ತ್ಯ ಮತ್ತು ಪಾಶ್ಚಾತ್ಯ ಭಾಷೆಗಳಲ್ಲಿ ಈ ಕಥೆಯು ಅನುವಾದ ಮಾಡಲ್ಪಟ್ಟಿದೆ. ಇದು ವಿಶ್ವ ಸಾಹಿತ್ಯಕ್ಕೆ ಸೇರಿಹೋದ ಗ್ರಂಥಗಳಲ್ಲಿ ಒಂದೆಂದು ಧಾರಾಳವಾಗಿ ಹೇಳಬಹುದು. ಉಪನಿಷತ್ತುಗಳು ಭಾರತೀಯ ಸಾಹಿತ್ಯಕ್ಕೆ ಸೇರಿದ್ದರೂ

ಹೇಗೆ ವಿಶ್ವಸಾಹಿತ್ಯರಾಶಿಗೆ ಸೇರಿರುವುವೋ ಅಂತೆಯೇ ಈ ಉಪಾಖ್ಯಾನವು ಭಾರತದಲ್ಲದ್ದರೂ ವಿಶ್ವಸಾಹಿತ್ಯರಾಶಿಯಲ್ಲಿ ಸೇರಿಹೋಗಿರುತ್ತದೆ. ರಷ್ಯಾದೇಶದ ಕವಿಯಾದ "ಜುಕೊಲ್ಸ್ಕಿ" ಎಂಬುವನು ಈ ಕಥೆಯನ್ನು ತನ್ನ ದೇಶಭಾಷೆಯಲ್ಲಿ ಬರೆದಿರುವನಂತೆ. ಹೀಗೆ ಈ ಕಥಾವಸ್ತುವು ವಿಶ್ವಸಾಹಿತ್ಯಕ್ಕೆ ಸೇರಿದ್ದರೂ ಇದನ್ನು ಪ್ರತಿಯೊಬ್ಬ ಕವಿಯೂ ತನಗೆ ತೋರಿದ ರೀತಿಯಲ್ಲಿ ಮಾರ್ಪಾಟುಮಾಡಿ ತನ್ನ ಗ್ರಂಥವನ್ನು ಬರೆದಿರುವನು. ಕನ್ನಡ ನಳಸಾಹಿತ್ಯಕೃತಿಗಳಲ್ಲಿ ಚೌಂಡರಸನ ನಳಚಂಪುವೇ ಮೊದಲನೆಯದು.* ಕವಿಯು ಭಾರತ ಕಥಾವಸ್ತುವನ್ನು ತನಗೆ ಬೇಕಾದಂತೆ ವ್ಯತ್ಯಾಸಮಾಡಿ ಈ ಕಾವ್ಯವನ್ನು ರಚಿಸಿರುವನು. ಇದರ ಬಂಧವು ಲಲಿತವಾಗಿರುವುದು. ಅಲಂಕಾರಗಳಲ್ಲಿ ರೂಪಕಾಲಂಕಾರವೇ ಹೆಚ್ಚಾಗಿದೆ. ಕೆಂಗು, ಸನ್ನಿಂ, ಬಳೆದಿಂ, ವಿದ್ರೂಪಂ ಇವೇ ಮೊದಲಾದ ಕೆಲವು ಅಪೂರ್ವಪ್ರಯೋಗಗಳನ್ನು ಬಿಟ್ಟು ಉಳಿದವೆಲ್ಲವೂ ಭಾಷಾಮರ್ಯಾದೆಗೆ ತಕ್ಕುವಾಗಿಯೇ ಇವೆ. ಕವಿಯು, ಕಾವ್ಯದ ಪಾಕವು ನಳಪಾಕಕ್ಕೆ ಸಮಾನವೆಂದು ತನ್ನ ಕವಿತಾ ಪ್ರೌಢಿಮೆಯನ್ನು ಈ ಕೆಳಗಿನ ಪದ್ಯದಲ್ಲಿ ಹೇಳಿಕೊಂಡಿರುವನು.

"ಯುವತೀ ಕೇಳ್ ಪೊಸತಂ ವಿಭಾವನೆ ಪದಂ ಬಂಧಂ ರಸಂ ರೀತಿ ಪಾ
ಕವಿಶೇಷಂ ನಯಮಾರ್ದವಂ ವಿಧುಲಸದ್ವರ್ಣಂ ಕ್ರಿಯಾಕೌಶಲಾ |
ದಿ ವಿವೇಕಂ ಪುದಿದಿರ್ಪ ವಿಸ್ಮಯವನೀಗಳ್ ಕಂಡೆನಾಂ ಭಾವಿಸಲ್
ಕವಿತಾಪ್ರೌಢಿಯೊ ಪಾಕರೂಢಿಯೊ ದಿಟಂ ಪೇಳ್ವಂದೆನಾನಂದದಿಂ ||"

ಸಂಸ್ಕೃತದಲ್ಲಿರುವ ದಂಡಿಯ ದಶಕುಮಾರ ಚರಿತ್ರೆಯನ್ನು ಕನ್ನಡಿಸಿರುವುದಾಗಿ ತನ್ನ ಅಭಿನವ ದಶಕುಮಾರಚರಿತ್ರೆಯ ಆರಂಭದಲ್ಲಿ ಹೇಳಿರುವಂತೆ ಚೌಂಡರಸನು ಈ ಕಾವ್ಯವನ್ನು ಯಾವ ಆಧಾರದ ಮೇಲೆ ಬರೆದನೆಂಬುದನ್ನು ವ್ಯಕ್ತಪಡಿಸಿಲ್ಲ. ಆದರೂ ಈತನು ತನಗೆ ಹಿಂದಿದ್ದ ಪ್ರಸಿದ್ಧ ಕವಿಗಳು ಬರೆದಿರುವ ನಳಸಾಹಿತ್ಯ ಗ್ರಂಥಗಳನ್ನು ನೋಡಿಯೇ ಈ ಕಾವ್ಯವನ್ನು ಬರೆದಿರಬೇಕು. ಈ ಗ್ರಂಥಗಳಲ್ಲಿ ಮುಖ್ಯವಾದುವು ತ್ರಿವಿಕ್ರಮಭಟ್ಟನ ನಳಚಂಪು, ಶ್ರೀಹರ್ಷನ ನೈಷಧಕಾವ್ಯ ಮತ್ತು ಇವೆಲ್ಲಕ್ಕೂ ಮೂಲವಾದ ಭಾರತದ ನಳೋಪಾಖ್ಯಾನ. ಶ್ಲೇಷೆ, ಯಮಕಾದಿಶಬ್ದಾಲಂಕಾರಗಳಿಂದ ಕೂಡಿದ ತ್ರಿವಿಕ್ರಮಭಟ್ಟನ ನಳಚಂಪುವಿನ ಕಥಾಸಂವಿಧಾನಕ್ಕೂ ಚೌಂಡರಸನ ಕಥೆಯ ಜೋಡಣೆಗೂ ಯಾವ ಸಾಮ್ಯವೂ ಇಲ್ಲ; ಮತ್ತು ತ್ರಿವಿಕ್ರಮನ ಕಾವ್ಯವು ನಮಗೆ ಪೂರ್ಣವಾಗಿ ದೊರೆತಿಲ್ಲ. ನಳನು

* ಕನ್ನಡದಲ್ಲಿ ಈ ನಳಚಂಪುವಿಗಿಂತ ಹಿಂದೆ ನಳದಮಯಂತೀ ಕಥೆಯ ಕಾವ್ಯಗಳಾವುವೂ ಇದ್ದಂತೆ ಕಂಡುಬಂದಿಲ್ಲ.

ಇಂದ್ರನ ದೂತನಾಗಿ ಹೋಗುವವರೆಗಿನ ಕಥಾಭಾಗವು ಮಾತ್ರ ಉಪ ಲಬ್ಧವಾಗಿದೆ.

ಕ್ರಿ. ಶ. ೧೨ನೇ ಶತಮಾನದ ಉತ್ತರಾರ್ಧದಲ್ಲಿದ್ದ ಶ್ರೀಹರ್ಷನ ನೈಷಧಕಾವ್ಯವೂ ಪೂರ್ಣವಾಗಿಲ್ಲ. ದಮಯಂತಿಯ ಸ್ವಯಂವರವಾದ ಮೇಲೆ ಕಲಿಯ ಪ್ರಭಾವದಿಂದಾದ ನಳದಮಯಂತಿಯರ ಅಗಲಿಕೆ, ದ್ಯೂತ ಪ್ರಕರಣ, ಪುನಸ್ಸ್ವಯಂವರ ಇವೇ ಮೊದಲಾದ ಕಥಾಭಾಗಗಳು ಈ ಕಾವ್ಯ ದಲ್ಲಿಲ್ಲ. ಆದರೆ ನೈಷಧದಲ್ಲಿ ಕಲ್ಪಿತವಾದ ಅನೇಕ ಸನ್ನಿವೇಶಗಳು ಚೌಂಡರಾಜನ ಕಾವ್ಯದಲ್ಲಿ ಸೇರಿಹೋಗಿವೆ. ಒಟ್ಟಿನಲ್ಲಿ ಈ ಕವಿಯು ಭಾರತದ ನಳೋಪಾಖ್ಯಾನವನ್ನೇ ಮೂಲವಾಗಿಟ್ಟುಕೊಂಡು ನೈಷಧದಲ್ಲಿ ರುವ ರಸಾತ್ಮಕ ಸನ್ನಿವೇಶಗಳನ್ನು ಅಲ್ಲಲ್ಲಿ ಉಪಯೋಗಿಸಿ ತನ್ನದೇ ಆದ ರೀತಿಯಲ್ಲಿ ಈ ನಳಚಂಪೂಕಾವ್ಯವನ್ನು ಬರೆದಿರುವುದಾಗಿ ಹೇಳಬಹುದು. ನೈಷಧದ ಸನ್ನಿವೇಶಗಳನ್ನು ಹೇಗೆ ಉಪಯೋಗಿಸಿಕೊಂಡಿರುವನು ಮತ್ತು ಭಾರತ ಕಥಾಭಾಗಗಳನ್ನು ಯಾವರೀತಿ ಮತ್ತು ಏತಕ್ಕಾಗಿ ಮಾರ್ಪಾಟು ಮಾಡಿರುವನು ಎಂಬುದನ್ನು ಮುಂದೆ ನಿರೂಪಿಸಿದೆ.

ಈ ಗ್ರಂಥ ಸಂಶೋಧನೆಯಲ್ಲಿ ನೆರವಾದ ನನ್ನ ಆಪ್ತಮಿತ್ರರಾದ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರಿಗೂ ಇದೇ ಸಂಸ್ಥೆಯಲ್ಲಿರುವ ವಿದ್ವಾನ್ ಶ್ರೀ ಎಸ್. ಎನ್. ಕೃಷ್ಣಜೋಯಿಸರಿಗೂ ಈ ಗ್ರಂಥದಲ್ಲಿ ಕೊಟ್ಟಿರುವ ವಿಟ್ಠಲದೇವರ ಛಾಯಾ ಚಿತ್ರಗಳ ಪಡಿಯಚ್ಚನ್ನು ಕೊಟ್ಟು ಸಹಾಯಮಾಡಿರುವ ಪ್ರಾಚೀನ ವಸ್ತ್ವನ್ವೇಷಣ ಶಾಖೆಯ ಮುಖ್ಯಾಧಿಕಾರಿ ಗಳಿಗೂ ನಾನು ಕೃತಜ್ಞನಾಗಿರುತ್ತೇನೆ.

**ಎಚ್. ಆರ್. ರಂಗಸ್ವಾಮಯ್ಯಂಗಾರ್ಯ,**
ಅಧ್ಯಕ್ಷ, ಪ್ರಾಚ್ಯ ವಿದ್ಯಾಸಂಶೋಧನ ಸಂಸ್ಥೆ, ಮೈಸೂರು.

---

## ಚೌಂಡರಸನು ಉಪಯೋಗಿಸಿಕೊಂಡಿರುವ ಶ್ರೀಹರ್ಷನ ನೈಷಧಕಾವ್ಯದ ಕಥಾಭಾಗಗಳು

(i) ಉಪವನದ ಸರೋವರದಲ್ಲಿದ್ದ ಹೊನ್ನಹಂಸವನ್ನು ನಳನು ಹಿಡಿದುಕೊಳ್ಳಲು, ಅದು ಕರುಣೆಯಿಟ್ಟು ತನ್ನನ್ನು ಬಿಡಬೇಕೆಂದು ಪ್ರಾರ್ಥಿಸಿತೆಂದು ಶ್ರೀಹರ್ಷನು ತನ್ನ ಕಾವ್ಯದ ಒಂದನೆಯ ಸರ್ಗದಲ್ಲಿ

ಧಿಗಸ್ತು ತೃಷ್ಣಾತರಲಂ ಭವನ್ಮನಃ
ಸಮೀಕ್ಷ್ಯ ಪಕ್ಷಾನ್ಮಮ ಹೇಮಜನ್ಮನಃ ।
ತವಾರ್ಣವಸ್ಯೇವ ತುಷಾರಸೀಕರೈ-
ರ್ಭವೇದಮೀಭಿಃ ಕಮಲೋದಯಃ ಕಿಯಾನ್ ॥೧೩೦॥

ನ ಕೇವಲಂ ಪ್ರಾಣಿವಧೋ ವಧೋ ಮಮ
ತ್ವದೀಕ್ಷಣಾದ್ವಿಶ್ವಸಿತಾಂತರಾತ್ಮನಃ ।
ವಿಗರ್ಹಿತಂ ಧರ್ಮಧನೈರ್ನಿಬರ್ಹಣಂ
ವಿಶಿಷ್ಯ ವಿಶ್ವಾಸಜುಷಾಂ ದ್ವಿಷಾಮಪಿ ॥ ೧೩೧ ॥

ಪದೇ ಪದೇ ಸಂತಿ ಭಟಾ ರಣೋದ್ಭಟಾ
ನ ತೇಷು ಹಿಂಸಾರಸ ಏಷ ಪೂರ್ಯತೇ ।
ಧಿಗೀದೃಶಂ ತೇ ನೃಪತೇ ಕುವಿಕ್ರಮಂ
ಕೃಪಾಶ್ರಯೇ ಯಃ ಕೃಪಣೇ ಪತತ್ರಿಣಿ ॥ ೧೩೨ ॥

ಮದೇಕಪುತ್ರಾ ಜನನೀ ಜರಾತುರಾ
ನವಪ್ರಸೂತಿರ್ವರಟಾ ತಪಸ್ವಿನೀ ।
ಗತಿಸ್ತಯೋರೇಷ ಜನಸ್ತಮರ್ದಯ
ನ್ನಹೋ ವಿಧೇ ತ್ವಾಂ ಕರುಣಾ ರುಣದ್ಧಿ ನ ॥ ೧೩೫ ॥

ಈ ಶ್ಲೋಕಗಳಿಂದ ವಿವರಿಸಿರುವ ಭಾವವನ್ನೇ ಚೌಂಡರಸನು ಈ ಕಾವ್ಯದ ೧೦೫–೧೦೯ ಪದ್ಯಗಳಲ್ಲಿ ಹೇಳಿರುವನು.

(ii) ನಳನು ಹಂಸವನ್ನು ಹಿಡಿದುಕೊಂಡು ಅದನ್ನು 'ನೀನು ಎಲ್ಲಿಂದ ಬಂದೆ? ದೇಹಕ್ಕೆಲ್ಲಿಯ ಪೊಂಗಱಿಗಳಾದುವೆಲ್ಲಿ ಪೇೞ್' ಎಂದು ಪ್ರಶ್ನಿಸಲು, ಅದು 'ಮೇರುಗಿರೀಂದ್ರದೊಳಿರ್ಪುದು ಸಂತತಮಪ್ಸರೋಗಣಂ' [ಪದ್ಯ ೧೦೩] 'ಅಲ್ಲಿ ಸಮಂತು ಪುಟ್ಟಿ ಬಳೆದಿಂ ಪಡೆದಲ್ಲಿಯ ಪದ್ಮ ಬೀಜದಿಂ ........ ತನು ಹೇಮವರ್ಣಮಾಯ್ತು' [ಪದ್ಯ ೧೦೪] ಎಂದು ಉತ್ತರಕೊಡುವುದು. ನಳಚಂಪುವಿನಲ್ಲಿರುವ ಈ ಪ್ರಶ್ನೋತ್ತರಗಳು ಭಾರತದಲ್ಲಿಲ್ಲ. ಆದರೆ ನೈಷಧದಲ್ಲಿ ದಮಯಂತಿಯು ಇದೇ ರೀತಿ ಹಂಸವನ್ನು ಪ್ರಶ್ನಿಸಿದಾಗ ಅದು ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿರುವಂತೆ ಮೂರನೆಯ ಸರ್ಗದ

'ಸ್ವರ್ಗಾಪಗಾ ಹೇಮಮೃಣಾಲಿನೀನಾಂ
ನಾಲಾ ಮೃಣಾಲಾಗ್ರಭುಜೋ ಭಜಾಮಃ।
ಅನ್ನಾನುರೂಪಾಂ ತನುರೂಪಋದ್ಧಿಂ
ಕಾರ್ಯಂ ನಿದಾನಾದ್ಧಿ ಗುಣಾನಧೀತೆ ॥೧೭॥'

ಈ ಶ್ಲೋಕದಿಂದ ತಿಳಿದುಬರುವುದು.

(iii) ಕಾವ್ಯನಾಯಕನ ಉದಾತ್ತತೆಯನ್ನೂ ಸದ್ಗುಣಸಂಪನ್ನತೆಯನ್ನೂ ಸೂಚಿಸುವ ದೃಷ್ಟಿಯಿಂದ ನೈಷಧಕಾವ್ಯದಲ್ಲಿರುವಂತೆ ಚೌಂಡರಾಜನು ತನ್ನ ಕೃತಿಯಲ್ಲಿ ನಳನು ಹೊನ್ನ ಹಂಸದ ಪ್ರಾರ್ಥನೆಯನ್ನು ಮನ್ನಿಸಿ ಯಾವ ಪ್ರತ್ಯುಪಕಾರವನ್ನೂ ನಿರೀಕ್ಷಿಸದೆ ಅದನ್ನು ಬಿಟ್ಟುದಾಗಿಯೂ ಆ ಹಂಸವು ಆತನಿಗೆ

"ಸತ್ಯಪರೋಪಕಾರ ಮಹದುನ್ನತಿ ನಿನ್ನದಾದೊಡಂ ಮನಂ ಪ್ರತ್ಯುಪಕಾರಮಂ ನಿನಗೊಡರ್ಚುವೆ" ನೆಂದೂ,

"ನಿನಗಾಂ ಮಾಳ್ಪುಪಕಾರಮಾವುದು ಕಳಾಸಂಪನ್ನೆ ಸೌಭಾಗ್ಯವ। ರ್ಧನೆಯಿರ್ಪಳ್ ದಮಯಂತಿ ಕುಂಡಿನಪುರಕ್ಕಾಂ ಬೇಗದಿಂ ಪೋಗಿ । ಮಾನಿನಿಯಂ ನಿನ್ನೊಡಗೂಡುವಂತೆಸಗಿ ... ........" ಎಂದು ಹೇಳಿತೆಂದೂ ಕಥಾಸಂದರ್ಭವನ್ನು ಕಲ್ಪಿಸಿರುವನು.

(iv) ದಮಯಂತಿಯು ವಿರಹತಾಪದಿಂದ ಕೃಶಳಾಗುತ್ತಿರುವುದನ್ನು ತಂದೆಯಾದ ಭೀಮರಾಜನು ನೋಡಿ, ಕಾರ್ಶ್ಯತೆಗೆ ಕಾರಣವನ್ನು ತಿಳಿಯಲು ವೈದ್ಯರನ್ನು ಕರೆಸಿ ಕೇಳಲು ಅವರು

"ರೋವಾಕರ್ಣಯ ಸುಶ್ರುತೇನ ಚರಕಸ್ಯೋಕ್ತೇನ ಜಾನ್ಯೇಖಿಲಂ।
ಸ್ಯಾದಸ್ಯಾ ನಲದಂ ವಿನಾ ನ ದಲನೇ ತಾಪಸ್ಯ ಕೋಽಪಿ ಕ್ಷಮಃ॥"

[ಸರ್ಗ ೪, ಶ್ಲೋಕ ೧೧೬]

ಎಂದು ಉತ್ತರಕೊಟ್ಟರೆಂಬುದನ್ನು ಶ್ರೀಹರ್ಷನು ತನ್ನ ಕಾವ್ಯದಲ್ಲಿ ಕಲ್ಪಿಸಿರುವನು. ಇದನ್ನನುಸರಿಸಿಯೇ ಚೌಂಡರಾಜನು ನಳಚಂಪುವಿನಲ್ಲೂ

"ಆದಾನ ನಿದಾನಜ್ಞರಂ ........... ಆಯುರ್ವೇದಿಗಳಂ ಕರೆಸಿದಂ ಧರಿತ್ರೀಕಾಂತಂ" [ಪದ್ಯ ೨೧೯]

"ಸುದತಿಯ ತಾಪಜ್ವರಮಾವುದಱಿಂ ಮಾಣ್ಬುದಮೆನಲ್ ಭೂಪಾಲಕ ಕೇಳಿದು ನಳದ ಕಷಾಯದಿ ........... ॥" [ಪದ್ಯ ೨೨೦] ಎಂದು ಹೇಳಿರುವನು.

(v) ಸ್ವಯಂವರವಾದಮೇಲೆ ಇಂದ್ರಾಗ್ನಿಯಮವರುಣರು ದಮಯಂತಿಗೆ "ಕಿಂಚಿತ್ತ್ವಯಾ ನಹಿ ಪತಿವ್ರತಯಾ ದುರಾಪಂ ಭಸ್ಮಾಸ್ತು ಯಸ್ತ್ವ ಬತ ವ್ರತಲೋಪಮಿಚ್ಛುಃ" ಎಂದು ವರ ಕೊಟ್ಟುದಾಗಿ ನೈಷಧದಲ್ಲಿ ಹೇಳಿರುವಂತೆ, ನಳಚಂಪುವಿನಲ್ಲಿ "ನಿನ್ನ ಪತಿವ್ರತಾಗುಣಮನಾರ್ ಕೆಡಿಸಲ್ ಬಗೆದಿರ್ದೊಡಾಕ್ಷಣಂ ನಿನ್ನಯ ಕೋಪವಹ್ನಿಯಿನವರ್ ಮಿಗೆ ಭಸ್ಮವನೆಯ್ದುಗೆ" ಎಂದು ಚೌಂಡರಾಜನು ವರ್ಣಿಸಿರುವನು. ಈ ಅಂಶವು ಭಾರತದಲ್ಲಿಲ್ಲ.

ಇವಲ್ಲದೆ ದಮಯಂತಿಯ ವಿರಹವರ್ಣನೆ, ಸ್ವಯಂವರ ಮಂಟಪದಲ್ಲಿರುವ ರಾಜರ ವರ್ಣನೆ, ಸ್ವಯಂವರವಾದಮೇಲೆ ನಡೆದ ಭೋಜನಕೂಟದ ವರ್ಣನೆ, ಇವುಗಳಲ್ಲಿ ಅನೇಕ ಅಂಶಗಳನ್ನು ಚೌಂಡರಾಜನು ಶ್ರೀಹರ್ಷನ ನೈಷಧವನ್ನನುಸರಿಸಿ ಬರೆದಿರುವನು. ಇದರಿಂದ, ಚೌಂಡರಸನು ಶ್ರೀಹರ್ಷನ ಕಾವ್ಯದಿಂದ ಕೆಲವು ಭಾಗಗಳನ್ನು ತನ್ನ ಕೃತಿಯನ್ನು ರಚಿಸಲು ಉಪಯೋಗಿಸಿಕೊಂಡಿರುವನೆಂದು ಧಾರಾಳವಾಗಿ ಹೇಳಬಹುದು.

---

## ಭಾರತದ ನಳೋಪಾಖ್ಯಾನಕ್ಕೂ ಚಾವುಂಡರಾಜನ ನಳಚಂಪುವಿಗೂ ಇರುವ ಕಥಾವ್ಯತ್ಯಾಸ

ಭಾರತದಲ್ಲಿ ದಮಯಂತಿಯ ಜನನಾದಿ ವಿಚಾರಗಳು ವಿಸ್ತಾರವಾಗಿ ವರ್ಣಿತವಾಗಿವೆ. ನಳನ ವಿಜಯಯಾತ್ರೆ, ಮೃಗಯಾವಿನೋದ ಇವುಗಳ ವರ್ಣನೆಯೇ ಇಲ್ಲ. ಚಾವುಂಡರಾಜನು ದಮಯಂತಿಯ ಜನನಾದಿ ವಿಷಯಗಳ ವರ್ಣನೆಗೆ ಹೆಚ್ಚು ಗಮನವಿಡದೆ 'ಭೀಮನೃಪಾಲಪುತ್ರಿ ದಮಯಂತಿ' ಎಂದು ಸೂಚಿಸಿ, ಆಕೆಯು ಲೋಕದಲ್ಲಿ ಅತಿಸುಂದರಿಯಾಗಿದ್ದಳೆಂದು ಮಾತ್ರ ವರ್ಣಿಸಿರುವನು. ಆದರೆ ನಳನ ಜನನ, ಆತನ ವಿಜಯಯಾತ್ರೆ ಮತ್ತು ಬೇಟೆಯಲ್ಲಿ ಆತನ ಸಾಮರ್ಥ್ಯ ಇವೆಲ್ಲವನ್ನೂ ಕವಿಯು ನಳಚಂಪುವಿನಲ್ಲಿ ವಿವರಿಸಿರುವನು. ಕವಿಯು ತನ್ನ ಕಾವ್ಯವು ಪುಣ್ಯನಳಚರಿತ್ರೆಯಾದುದರಿಂದ ಕಥಾನಾಯಕನ ಉತ್ಕರ್ಷಾವಹವಾದ ಸಂಗತಿಗಳನ್ನೇ ಹೆಚ್ಚಾಗಿ ವರ್ಣಿಸಬೇಕೆಂದು ಈ ರೀತಿ ಭಾರತದ ಮೂಲ ಕಥಾಭಾಗವನ್ನು ಮಾರ್ಪಾಟು ಮಾಡಿರುವನು.

ದಮಯಂತಿಯ ರೂಪಲಾವಣ್ಯಾತಿಶಯಗಳನ್ನು ಕೇಳಿ ಮನಸೋತು ವಿರಹವ್ಯಥೆಯಿಂದ ಸಂತಪ್ತನಾಗಿ ಆ ತಾಪವನ್ನು ನೀಗಿಕೊಳ್ಳಲು ನಳನು ಉಪವನಕ್ಕೆ ಹೋಗುವನು. ಅಲ್ಲಿ ಸಂಚರಿಸುತ್ತಿರುವಾಗ ಕೊಳದಲ್ಲಿದ್ದ ಒಂದು ಹೊನ್ನಹಂಸವನ್ನು ಆತನು ಕಂಡು ಅದನ್ನು ಹಿಡಿದುಕೊಳ್ಳುವನು. ಆಗ ಆ ಪಕ್ಷಿಯು ಭಯದಿಂದ "ಎಲೈ ರಾಜನೆ, ನನ್ನನ್ನು ಕೊಲ್ಲದೆ ಬಿಡು ; ನಾನು ದಮಯಂತಿಯ ಸಮೀಪಕ್ಕೆ ಹೋಗಿ ಅವಳು ಮತ್ತಾರನ್ನೂ ವರಿಸದೆ ನಿನ್ನನ್ನೇ ವರಿಸುವಂತೆ ಮಾಡುವೆನು" ಎಂದು ಹೇಳಿಕೊಳ್ಳಲು ಆತನು ಹಿಡಿದಿದ್ದ ಆ ಹಂಸವನ್ನು ಬಿಟ್ಟನೆಂದು ಭಾರತದಲ್ಲಿದೆ. *ನಳಚಂಪುವಿನಲ್ಲಿ ಬೇಟೆಗಾರರ ಪ್ರೇರಣೆಯಂತೆ ವಿರಹ

---

* ಸಂಸ್ಕೃತ ನಳಚಂಪುವಿನಲ್ಲಿ ಬೇಟೆಯ ಪ್ರಕರಣವು ವರ್ಣಿತವಾಗಿದ್ದರೂ ಸನ್ನಿವೇಶವು ಬೇರೆಯಾಗಿದೆ. ಚಾವುಂಡರಸನ ಕೃತಿಯಲ್ಲಿರುವಂತೆಯೇ ಕನಕದಾಸನ ನಳಚರಿತ್ರೆಯಲ್ಲೂ ಬೇಟೆಯ ಸನ್ನಿವೇಶವು ವರ್ಣಿಸಲ್ಪಟ್ಟಿದೆ.

ಸಂತಪ್ತನಾದ ನಳನು ಬೇಟೆಯಾಡಲು ಹೋಗುವನು. ಹಂಸವನ್ನು ಬಿಟ್ಟಮೇಲೆ ಅದು "ದಮಯಂತಿಯು ನಿನ್ನನ್ನೇ ವರಿಸುವಂತೆಮಾಡುವೆನು" ಎಂದು ನಳನಿಗೆ ಏಕಾಂತದಲ್ಲಿ ಹೇಳಿ ಹೋಗುವುದು.

ಇಲ್ಲಿ ನಾಯಕನ ಸಾಮರ್ಥ್ಯವನ್ನು ವ್ಯಕ್ತಪಡಿಸುವುದಕ್ಕಾಗಿ ಬೇಟೆಯ ಸನ್ನಿವೇಶವನ್ನೂ ಆತನ ದಯಾಲುತ್ವವನ್ನು ಸೂಚಿಸಲು ನಳನು ಹಂಸವನ್ನು ಬಿಟ್ಟಮೇಲೆ ಅದು ಅವನಿಗೆ "ದಮಯಂತಿಯು ನಿನ್ನನ್ನೇ ವರಿಸುವಂತೆ ಮಾಡುವೆನೆಂದು" ತಿಳಿಸಿತೆಂದೂ ಕವಿಯು ತನ್ನ ಕೃತಿಯಲ್ಲಿ ಹೇಳಿರುವನು.

ದಮಯಂತಿಯ ವಿರಹವರ್ಣನೆ, ನಳನು ಸ್ವಯಂವರಕ್ಕೆ ಹೊರಟಾಗ ಮಾಡುವ ಗಣಪತಿಯಸ್ತುತಿ, ನಳನು ದೂತನಾಗಿ ದಮಯಂತಿಯ ಅಂತಃಪುರಕ್ಕೆ ಹೋದಾಗ ಅವನಿಗೆ ತಿಳಿಯದೆ ಸೂಕ್ಷ್ಮಾಕೃತಿಯಿಂದ ಮಾನಿನಿಯೊಬ್ಬಳು ಇಂದ್ರನಾಣತಿಯಂತೆ ಅವನೊಡನೆ ಹೋಗುವುದು—ಇವು ಭಾರತದಲ್ಲಿಲ್ಲ. ಇವೆಲ್ಲವೂ ಚೌಂಡರಸನ ಕಲ್ಪನೆಗಳು.

ಲೋಕಸಂಚಾರಿಯಾದ ನಾರದನು ಪರ್ವತನೊಡನೆ ಇಂದ್ರನ ಮನೆಗೆ ಹೋಗುವನು. ಇಂದ್ರನು ಅವರನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸುವನು. ಅನಂತರ ವಿಶೇಷವಾರ್ತೆ ಏನೆಂದು ಇಂದ್ರನು ಪ್ರಶ್ನಿಸಲು, ನಾರದನು ಕುಂಡಿನ ನಗರಿಯಲ್ಲಿ ನಡೆಯಲಿರುವ ದಮಯಂತೀ ಸ್ವಯಂವರದ ವಿಚಾರವನ್ನು ಅವನಿಗೆ ತಿಳಿಸುವ ವೇಳೆಗೆ ಸರಿಯಾಗಿ ಅಗ್ನ್ಯಾದಿ ದಿಕ್ಪಾಲಕರು ಅಲ್ಲಿಗೆ ಬರುವರು. ಎಲ್ಲರೂ ದಮಯಂತೀ ಸ್ವಯಂವರದ ವಿಚಾರವನ್ನು ಕೇಳಿ ಹರ್ಷಿತರಾಗಿ ತಾವೂ ಸ್ವಯಂವರಕ್ಕೆ ಹೊರಡುವರು. ದಾರಿಯಲ್ಲಿ ಮನ್ಮಥನಂತಿದ್ದ ನಳನನ್ನು ಕಂಡು ವಿಸ್ಮಿತರಾಗಿ ಅವನ ಸಮೀಪಕ್ಕೆ ಬಂದು, ನೀನು ನಮಗೆ ದೂತನಾಗಿ ಸಹಾಯಮಾಡಬೇಕೆಂದು ತಿಳಿಸಲು, ಪರೋಪಕಾರಿಯಾದ ನಳನು ಒಪ್ಪಿಕೊಳ್ಳುವನು. ಅವನು ಇಂದ್ರಾದಿಗಳನ್ನು 'ನೀವು ಯಾರು? ಏತಕ್ಕೆ ನನ್ನನ್ನು ದೂತನಾಗಲು ಇಚ್ಛಿಸಿದಿರಿ? ನಾನು ದೂತನಾಗಿ ಮಾಡುವ ಕಾರ್ಯವಾವುದು?' ಎಂದು ಪ್ರಶ್ನಿಸುವನು. ಆಗ ಅವರು ತಾವು ಇಂದ್ರಾಗ್ನಿಯಮವರುಣರೆಂದು ತಮ್ಮ ಪರಿಚಯವನ್ನು ನಳನಿಗೆ ಮಾಡಿಕೊಟ್ಟು, "ನಾವು ದಮಯಂತಿಯನ್ನು ವರಿಸಲು ಬಂದಿರುವೆವು. ನೀನು, ನಾವು ವರಿಸಲು ಬಂದಿರುವ ವಿಷಯವನ್ನು ದಮಯಂತಿಗೆ ತಿಳಿಸಿ, ಅವಳು ನಮ್ಮಲ್ಲಾರನ್ನಾದರೂ ವರಿಸುವಂತೆ ಹೇಳು" ಎನ್ನುವರು. ದಮಯಂತಿಯನ್ನು ವರಿಸುವುದಕ್ಕಾಗಿಯೇ ಬಂದಿರುವ ತನಗೆ ಈ ಕಾರ್ಯವನ್ನು ಮಾಡುವಂತೆ ನಿಯಮಿಸುವುದು ಸರಿಯಲ್ಲವೆಂದು ನಳನು ಅವರಿಗೆ ತಿಳಿಸುವನು. ಇದನ್ನು ಕೇಳಿದ ಇಂದ್ರನು 'ಮೊದಲು ಮಾಡುವೆನೆಂದು ಮಾತು

ಕೊಟ್ಟು ಈಗ ಹೀಗೆ ಹೇಳುವುದು ನಿನಗೆ ತಕ್ಕುದಲ್ಲ' ಎಂದು ಹೇಳಲು ನಳನು ಮರುಮಾತಾಡದೆ ಕಾರ್ಯೋನ್ಮುಖನಾಗುವನು. ಅಂತಃಪುರವನ್ನು ಪ್ರವೇಶಿಸಿದ ನಳನ ತೇಜಸ್ಸನ್ನು ನೋಡಿ ಭ್ರಾಂತರಾದ ಸಖಿಗಳಾರೂ ಅವನೊಡನೆ ಸಂಭಾಷಿಸಲು ಸಮರ್ಥರಾಗಲಿಲ್ಲ. ಅವನು ದಮಯಂತಿ ಇದ್ದೆಡೆಗೆ ಹೋಗಲು, ದಮಯಂತಿಯೇ ಅವನನ್ನು "ನೀನು ಯಾರು? ಏತಕ್ಕೆ ಬಂದೆ? ಇತರರಿಗೆ ಕಾಣದಂತೆ ಇಲ್ಲಿಗೆ ಹೇಗೆ ಬಂದೆ?" ಎಂದು ಪ್ರಶ್ನಿಸಲು, ತಾನು ದೇವತೆಗಳಿಗೆ ದೂತನಾಗಿ ಬಂದಿರುವ ನಳನೆಂದೂ ಅವರ ಪ್ರಭಾವದಿಂದಲೇ ತಾನು ಇತರರಿಗೆ ಕಾಣದಂತೆ ಅಲ್ಲಿಗೆ ಬಂದನೆಂದೂ ಹೇಳುವನು. ಅನಂತರ ನಳನು, ಇಂದ್ರಾಗ್ನಿಯಮವರುಣರಲ್ಲಿ ಒಬ್ಬನನ್ನು ನೀನು ವರಿಸೆಂದು ಅನೇಕ ವಿಧದಲ್ಲಿ ದಮಯಂತಿಗೆ ತಿಳಿಸಿದರೂ ಅವಳು ನಳನನ್ನು ಬಿಟ್ಟು ಮತ್ತಾರನ್ನೂ ತಾನು ವರಿಸುವುದಿಲ್ಲವೆಂದು ಉತ್ತರ ಕೊಡುವಳು. ಧರ್ಮಭೀರುವಾದ ನಳನು ಪರಾರ್ಥಕ್ಕೆ ಬಂದವನು ಸ್ವಾರ್ಥವನ್ನು ಸಾಧಿಸಿದಂತಾಯಿತಲ್ಲಾ ಎಂದು ಯೋಚಿಸುತ್ತಿರಲು ದಮಯಂತಿಯು ನಳನಿಗೆ "ಸ್ವಯಂವರ ಮಂಟಪಕ್ಕೆ ನೀನೂ ಇಂದ್ರಾದಿಗಳೊಡನೆ ಬಂದಾಗ ಅವರೆದುರಿನಲ್ಲೇ ನಿನ್ನನ್ನು ವರಿಸುವುದರಿಂದ ಯಾವ ಹಾನಿಯೂ ಇಲ್ಲ" ಎಂದು ಹೇಳುವಳು. ನಳನು ದೇವತೆಗಳ ಸಮೀಪಕ್ಕೆ ಬಂದು ದಮಯಂತಿಯು ಹೇಳಿದಂತೆಯೇ ಅವರಿಗೆ ತಿಳಿಸುವನು.

"ಏತಾವದೇವ ವಿಬುಧಾ ಯಥಾವೃತ್ತಮುಪಾಹೃತಂ ।
ಮಯಾ ಶೇಷೇ ಪ್ರಮಾಣಂ ತು ಭವನ್ತಸ್ತ್ರಿದಶೇಶ್ವರಾಃ ॥"

ಎಂದು ಕೊನೆಯಲ್ಲಿ ನಳನು ಇಂದ್ರಾದಿಗಳಿಗೆ ಹೇಳುವನು. ಭಾರತದ ಈ ಕಥಾಭಾಗವನ್ನೇ ಕವಿಯು ನಳಚಂಪುವಿನಲ್ಲಿ ಹೇಳಿದ್ದರೂ ಅಲ್ಲಲ್ಲಿ ಕೆಲವು ವ್ಯತ್ಯಾಸ ಮಾಡಿರುವನು. ಪರ್ವತಋಷಿಯ ಪಾತ್ರದಿಂದ ಕಥೆಗೆ ಯಾವ ಪೋಷಣೆಯೂ ಇಲ್ಲವೆಂದು ತಿಳಿದು ಕವಿಯು ನಾರದನೊಬ್ಬನೇ ಇಂದ್ರನ ಆಸ್ಥಾನಕ್ಕೆ ಹೋದನೆಂದು ತಿಳಿಸಿರುವನು. ನಾರದನು ಇಂದ್ರಾಗ್ನಿಯಮವರುಣರಿಗೆ ದಮಯಂತಿಯ ಸ್ವಯಂವರದ ವಿಷಯವನ್ನು ಹೇಳಿ 'ಆಕೆ ನಳನಲ್ಲದುಟಿದರನೇಕಾಂತದೊಳಂ ವಿಚಾರಿಸಳ್' ಎಂದು ತಿಳಿಸಲು, ಅದನ್ನು ಕೇಳಿದ ಅಮರೇಂದ್ರವಹ್ನಿಕಾಲವರುಣರು "ಭೂಮಿಯೊಳ್ ಚಲ್ವೆಯಪ್ಪಳ್

ದಮಯಂತೀ ನಾಮಮುಳ್ಳಂಗನೆ, ನಳನಧಿಪಂ ಮಿಕ್ಕರೇಬಾಡೆ ಯೆಂಬುತ್ತಮಸತ್ತ್ವಂ ವ್ಯರ್ಥವಪ್ಪಂತೆಸಗುವೆವು" ಎಂದು ಯೋಚಿಸಿ ವಿದರ್ಭನಗರಿಗೆ ಹೊರಟರೆಂದು ಕವಿಯು ನಳಚಂಪುವಿನಲ್ಲಿ ಹೇಳಿರುವನು. ಈ ರೀತಿ ದಮಯಂತಿಯು ನಳನಲ್ಲಿ ಅನುರಕ್ತಳಾಗಿರುವಳೆಂದು ದೇವತೆಗಳಿಗೆ ತಿಳಿದುದರಿಂದಲೇ, ನಳನನ್ನು ದೂತನಾಗಿ ಕಳುಹಿಸುವುದರಿಂದ ತಮ್ಮ ಕಾರ್ಯವು ಸಿದ್ಧಿಸುವುದೆಂದು ಯೋಚಿಸಲು ಅವಕಾಶವಾಯಿತೆಂದು ತಿಳಿಸುವುದಕ್ಕಾಗಿಯೇ ಹೀಗೆ ಹೇಳಿರುವನು. ಈ ಅಂಶವನ್ನೇ "ಶಾತೋದರಿ ಬಯಸುವ ನಳನೀತಂ ತಾಂ ದೂತನಾಗಿ ಪೋದೊಡೆ ತತ್ಕಾಂ । ತಾತತಿಯಿವನೆಲ್ಲಿಯನೆಂದೇತೆಱದಿಂ ನೀಚನಾಗಿಪರ್ ನಸುನಗುತಂ ॥" ಎಂಬ ಪದ್ಯದಿಂದ ಸೂಚಿಸಿರುವನು. ಅಲ್ಲದೆ

"ವೈದರ್ಭನಂದನೆ ಯೆಂಬಳ್ ದಮಯಂತಿಯಾಕೆಯನಲಂಪಿಂದಿತ್ತು ಮತ್ಪ್ರೇಮವರ್ಧನಮಂ ಮಾಳ್ಪುದು" ಎಂದು ದೇವತೆಗಳು ನಳನಿಗೆ ಹೇಳಲು, ರಾಜನು ನಕ್ಕು 'ಅದೆನ್ನಿಚ್ಛೆಯೇ ಲೋಕರತ್ನವನದಂ ತಾನೀಯಲೇಂ ಬಕ್ಕುಮೇ' ಎಂದು ಉತ್ತರವನ್ನು ಹೇಳುವನು ; ಎಂದು ಮೊದಲು ತಿಳಿಸಿ, ಅನಂತರ ದೇವತೆಗಳು 'ಮನೋದುರ್ಘಟಕಾರ್ಯವೆನ್ನದೆ ದಮಯಂತಿಯು ನಮ್ಮನ್ನು ವರಿಸುವಂತೆ ಮಾಡು' ಎಂದು ನಳನಿಗೆ ತಿಳಿಸಲು, ಅದರಂತೆ ಅವನು ದಮಯಂತಿಯ ಸಮೀಪಕ್ಕೆ ಹೋಗುವನೆಂದು ನಳಚಂಪುವಿನಲ್ಲಿ ಕವಿಯು ಸನ್ನಿವೇಶವನ್ನು ಬದಲಾಯಿಸಿರುವನು. ಇಲ್ಲಿ ದೇವತೆಗಳು ನಳನನ್ನು ತಮಗೆ ದೂತನಾಗಬೇಕೆಂದು ಕೇಳಿದರೆಂದು ಹೇಳದೆ, 'ನೀನೆಮಗೊಂದುತ್ತಮ ಕಾರ್ಯವನೆಸಗು' ಎಂದು ಹೇಳಿರುವುದನ್ನು ನೋಡಿದರೆ ರಾಜನಾದ ನಳನನ್ನು ದೂತನಾಗಿ ಭಾವಿಸುವುದು ನಾಯಕಾಪಕರ್ಷವಾಗುವುದೆಂದು ಭಾವಿಸಿ ಈ ರೀತಿ ಹೇಳಿರಬಹುದು.

ನಳನು ದಮಯಂತಿಯ ಅಂತಃಪುರಕ್ಕೆ ಹೋದಾಗ 'ಆ ನೃಪನಱಿಯದ ತೆಱದಿಂ ಮಾನಿನಿಯೊರ್ವಳನತೀವ ಸೂಕ್ಷ್ಮಾಕೃತಿಯಿಂ । ನೀನೊಡನಿರೆಂದು ಕಳುಪಿದನೇನಂ ಪೇಳ್ವಪ್ಪನೆಂದು ದಿವಿಜಾಧೀಶಂ ॥' ಎಂಬ ಹೊಸ ಸನ್ನಿವೇಶವನ್ನು ಚಾಂಡರಸನು ಕಲ್ಪಿಸಿರುವನು. ಭಾರತದಲ್ಲಿ ನಳನು ದೇವತೆಗಳಿಗೆ ಕೊನೆಯಲ್ಲಿ 'ಶೇಷೇ ಪ್ರಮಾಣಂ ತು ಭವಂತಸ್ತ್ರಿದಶೇಶ್ವರಾಃ' ಎಂದು ಹೇಳಿದನೆಂದಿದೆ. ಇಲ್ಲಿ ದೇವತೆಗಳಾದ ನಿಮಗೆ ಜ್ಞಾನದೃಷ್ಟಿಯಿಂದ ಎಲ್ಲವನ್ನೂ ತಿಳಿಯಲು ಸಾಮರ್ಥ್ಯವಿರುವುದೆಂದು ಸೂಚಿಸಿರುವುದು ಕವಿಗೆ ಸರಿತೋರಲಿಲ್ಲ. ಜ್ಞಾನದೃಷ್ಟಿಯಿಂದಲೇ ದಮಯಂತಿಯು ತಮಗೆ ದೊರೆಯುವುದಿಲ್ಲವೆನ್ನುವ ಅಂಶವನ್ನು ಅವರು ಮೊದಲೇ ತಿಳಿದುಕೊಂಡು ಸ್ವಯಂವರಾರ್ಥಿಗಳಾಗಿ ಬರದೇ ಇರಬಹುದಾಗಿತ್ತು ; ಎಂದು ಯೋಚಿಸಿ ಕವಿಯು

ಈ ಅಂಶವನ್ನೇ ಎತ್ತದೆ ಮಾನಿನಿಯನ್ನು ನಳನೊಡನೆ ಕಳುಹಿಸಿದರೆಂದು ಸನ್ನಿವೇಶವನ್ನು ಬದಲಾಯಿಸಿರುವನು.*

ಭಾರತದಲ್ಲಿ "ಅಂತಃಪುರಕ್ಕೆ ಬಂದ ನಳನನ್ನು ದಮಯಂತಿಯು ನೀನಾರೆಂದು ಪ್ರಶ್ನಿಸುವಳು. ಅದಕ್ಕೆ ನಳನು 'ನಲಂ ಮಾಂ ವಿದ್ಧಿ ಕಲ್ಯಾಣಿ ದೇವದೂತಮಿಹಾಗತಂ' ಎಂದು ಹೇಳಿ ಅನಂತರ ದೇವತೆಗಳು ಹೇಳಿಕಳುಹಿಸಿದ ಸಂದೇಶವನ್ನು ದಮಯಂತಿಗೆ ತಿಳಿಸುವನು. ನಳ ಚಂಪುವಿನಲ್ಲಿ ದಮಯಂತಿಯ ಆದೇಶದಂತೆ ಸಖಿಯು, ನಿನ್ನ ನಾಮವೇಂ? ಎಂದು ನಳನನ್ನು ಪ್ರಶ್ನಿಸಲು, ಅವನು ತನ್ನ ಹೆಸರನ್ನು ಮೊದಲು ತಿಳಿಸದೆ 'ನೀನೆಂಬೀ ನಾಮವೇ ನಾಮದ ನೆಲೆ' ಎಂದು ಹೇಳಿ, 'ಇಂದ್ರಾಗ್ನಿಯಮವರುಣರು ದಮಯಂತಿಯನ್ನು ವರಿಸುವ ಮನವುಳ್ಳವರಾಗಿ ಬಂದಿರುತ್ತಾರೆ; ಈ ವಿಷಯವನ್ನು ಅವಳಿಗೆ ತಿಳಿಸುವುದಕ್ಕಾಗಿ ನನ್ನನ್ನು ಅವರು ಕಳುಹಿಸಿರುವರು; ಎಂದು ಉತ್ತರ ಕೊಡುವನು. ಆ ಮಾತನ್ನು ಕೇಳಿದ ದಮಯಂತಿಯು ಕರದಿಂದ ಕಿವಿಯನ್ನು ಮುಚ್ಚಿ 'ಈ ಮಾತಾಡುವರೇ ಬುಧರ್ ನಳನೃಪಂ ಪ್ರಾಣೇಶ್ವರಂ ಮಿಕ್ಕವರ್ ಕಾಮಾರ್ಥರ್ ಬಯಲಾಸೆಯಂ ತಳೆಯಲೇಕಿನ್ನಾದೊಡಂ ಪೇಳ್ ನಿನ್ನ ನಾಮಮಂ' ಎಂದು ಕೇಳಿಕೊಂಡ ಮೇಲೆ ನಳನು 'ಆದೊಡೆ ನಳನಾಂ' ಎಂದು ತನ್ನ ಹೆಸರನ್ನು ದಮಯಂತಿಗೆ ತಿಳಿಸುವನು" ಎಂದಿದೆ. ಇದರಿಂದ ನಾಯಕನ ಸತ್ಯಸಂಧತೆ ಮತ್ತು ಕಾರ್ಯನಿಸ್ಪೃಹತೆಯು ಎದ್ದುತೋರುವುದು.

ಸ್ವಯಂವರವಾದಮೇಲೆ ಇಂದ್ರಾಗ್ನಿಗಳು ನಳನಿಗೆ ಒಟ್ಟು ಎಂಟು ವರಗಳನ್ನು ಕೊಟ್ಟು ಸ್ವಸ್ಥಾನಕ್ಕೆ ತೆರಳಿದರೆಂದು ಭಾರತದಲ್ಲಿದೆ. ಇಲ್ಲಿ ಕವಿಯು, ಕಾರ್ಯಾಂತದಲ್ಲಿ ಕೆಲಸ ಮಾಡಿದವರಿಗೆ ಪ್ರತಿಫಲ ಕೊಡುವುದು ಲೋಕರೂಢಿಯಲ್ಲಿರುವಂತೆ ತಾನೂ 'ನಳನ ದೌತ್ಯವು ಮುಗಿದೊಡನೆಯೇ ಅವನ ಸತ್ಯ ಮತ್ತು ನಿಸ್ಪೃಹತೆಗೆ ಮೆಚ್ಚಿ, ಇಂದ್ರನು ಅಶ್ವಹೃದಯ ಜ್ಞಾನವನ್ನೂ ಅಗ್ನಿಯು ನೆನೆದಾಗ ಅಗ್ನಿಸಿದ್ಧಿಯನ್ನೂ ಯಮನು ಸಮರವಿಜಯವನ್ನೂ ವರುಣನು ನಿರ್ಮಳ ಕೋಮಲಜಲಸಿದ್ಧಿಯನ್ನೂ ವರವಾಗಿ ಕೊಡುವರು' ಎಂದು ವರಕೊಡುವ ಸನ್ನಿವೇಶವನ್ನು

---

* ಕನಕದಾಸನ ನಳಚರಿತ್ರೆಯಲ್ಲಿ ಕಥಾಸಂದರ್ಭವು ಈ ರೀತಿಯಿದೆ: 'ನಳನು ದಮಯಂತಿಯ ಸಮೀಪಕ್ಕೆ ಹೋಗುವುದಕ್ಕೆ ಸ್ವಲ್ಪ ಮುಂಚೆ ರಂಭೆಯೇ ಮೊದಲಾದ ಅಪ್ಸರೆಯರು ಅವಳಲ್ಲಿಗೆ ಹೋಗಿ ಇಂದ್ರ ಅಗ್ನಿ ಯಮ ವರುಣರು ನಿನ್ನನ್ನು ಪ್ರೀತಿಸಿ ಬಂದಿರುವರು ನೀನು ಅವರನ್ನು ವರಿಸು' ಎಂದು ಹೇಳುವರು. ದಮಯಂತಿಯು ನಳನನ್ನು ಬಿಟ್ಟು ಮತ್ತಾರನ್ನೂ ತಾನು ವರಿಸುವುದಿಲ್ಲವೆಂದು ತಿಳಿಸುವಳು. ಈ ವಿಷಯವನ್ನು ಅಪ್ಸರೆಯರು ಇಂದ್ರಾದಿಗಳಿಗೆ ಹೇಳುವರು. ಅನಂತರ ನಳನು ದಮಯಂತಿಯ ಸಮೀಪಕ್ಕೆ ಹೋಗುವನು.

ಬದಲಾಯಿಸಿರುವನು. ಅಲ್ಲದೆ ದಮಯಂತಿಯ ಚಿತ್ತಸ್ಥೈರ್ಯಕ್ಕೆ ಮೆಚ್ಚಿ ಸ್ವಯಂವರಾಂತ್ಯದಲ್ಲಿ ಅವಳಿಗೆ ವರವನ್ನು ಕೊಟ್ಟರೆಂದು ಹೇಳಿರುವನು. ಮುಂದೆ ಕಾಡಿನಲ್ಲಿ ಒರ್ವಳೇ ಹೋಗುತ್ತಿರುವಾಗ ತನ್ನನ್ನು ಮೋಹಿಸಲು ಬಂದ ವನಚರನನ್ನು ದಮಯಂತಿಯು ಕೋಪಾಗ್ನಿಯಿಂದ ಸುಟ್ಟಳು ಎಂದಿರುವ ಕಥೆಗೆ ಸಹಾಯಕವಾಗಿ ಈ ಸನ್ನಿವೇಶವನ್ನು ಕಲ್ಪಿಸಿರುವನು.

ಭಾರತದಲ್ಲಿ—ಕಲಿಯು ದ್ವಾಪರನನ್ನು 'ತ್ವಮಪ್ಯಕ್ಷಾನ್ ಸಮಾವಿಶ್ಯ ಸಾಹಾಯ್ಯಂ ಕರ್ತುಮರ್ಹಸಿ' ಎಂದು ಸಹಾಯಕ್ಕೆ ಅಪೇಕ್ಷಿಸಿದನೆಂದಿದೆ. ನಳಚಂಪುವಿನಲ್ಲಿ ದ್ವಾಪರನ ಹೆಸರಿಲ್ಲ.

ಚೌಂಡರಸನ ಕಾವ್ಯದಲ್ಲಿರುವ ಸ್ವಯಂವರಕ್ಕೆ ಬರುವ ರಾಜರ ವರ್ಣನೆ, ಸ್ವಯಂವರದ ವರ್ಣನೆ, ಭೋಜನ ಕೂಟ ಮತ್ತು ಓಕುಳಿಯ ವರ್ಣನೆ ಇವು ಭಾರತದಲ್ಲಿಲ್ಲ. ಕವಿಯ ಸ್ವಂತ ಕಲ್ಪನೆಗಳು.

"ಕಾಡಿನಲ್ಲಿ ಒರ್ವಳೇ ಹೋಗುತ್ತಿದ್ದ ದಮಯಂತಿಯನ್ನು ಅಜಗರವು ನುಂಗಲು ಬಂದುದು, ಅದನ್ನು ವನಚರನು ಸಂಹರಿಸಿದುದು ಮತ್ತು ಅವಳು ಒಂದು ಋಷ್ಯಾಶ್ರಮವನ್ನು ಕಂಡು ಪ್ರವೇಶಿಸಿದುದು, ಋಷಿಗಳು ಅವಳನ್ನು ಸಮಾಧಾನಪಡಿಸಿ ಅದೃಶ್ಯರಾದುದು." ಭಾರತದಲ್ಲಿರುವ ಈ ಕಥಾಭಾಗಗಳು ನಳಚಂಪುವಿನಲ್ಲಿಲ್ಲ.

ದಮಯಂತಿಯು ಸಾರ್ಥವಾಹರೊಡನೆ ಕೆಲವುದಿನ ಪ್ರಯಾಣ ಮಾಡಿದಮೇಲೆ ಒಂದುದಿನ ಸರೋವರದ ಸಮೀಪದಲ್ಲಿ ಬೀಡು ಬಿಟ್ಟಿದ್ದಾಗ ಆನೆಯ ಗುಂಪೊಂದು ಅಲ್ಲಿಗೆ ಬಂದು ಅವರನ್ನು ತೊಂದರೆಪಡಿಸಿತೆಂದು ಭಾರತದಲ್ಲಿದೆ. ನಳಚಂಪುವಿನಲ್ಲಿ—ದಮಯಂತಿಯು ಸರೋವರದ ಸಮೀಪದಲ್ಲಿ ಬೀಡು ಬಿಟ್ಟಿದ್ದ ವರ್ತಕರ ಗುಂಪನ್ನು ಕಂಡು ಅಲ್ಲಿಗೆ ಬರುವ ವೇಳೆಗೆ ಸರಿಯಾಗಿ ಇಭಪತಿಯೊಂದು ಬಂದು ವರ್ತಕರನ್ನು ತೊಂದರೆಪಡಿಸಿತೆಂದಿದೆ.

"ಭೀಮರಾಜನು ನಳದಮಯಂತಿಯರನ್ನು ಹುಡುಕಲು ಕಳುಹಿಸಿದ ಬ್ರಾಹ್ಮಣರಲ್ಲಿ ಸುದೇವನೆಂಬುವನು ಸುಬಾಹುವಿನ ಅಂತಃಪುರದಲ್ಲಿ ಸೈರಂಧ್ರಿಯಾಗಿದ್ದ ದಮಯಂತಿಯನ್ನು ಹುಬ್ಬಿನ ಮಧ್ಯದಲ್ಲಿದ್ದ ಮಚ್ಚೆಯಿಂದ ಗುರುತಿಸುವನು. ಆಗ ರಾಜಮಾತೆಗೆ ಸೈರಂಧ್ರಿಯು ತನ್ನ ಅಕ್ಕನ ಮಗಳೆಂದು ತಿಳಿಯಿತು. ತನ್ನ ಮಕ್ಕಳನ್ನು ನೋಡಬೇಕೆಂದು ಕಾತರಳಾಗಿದ್ದ ದಮಯಂತಿಯ ಇಷ್ಟದಂತೆಯೇ ಸುನಂದನೊಡನೆ ಅವಳನ್ನು ಕುಂಡಿನಪುರಕ್ಕೆ ಸುಬಾಹುವು ಕಳುಹಿಸುವನು" ಎಂದು ಭಾರತದಲ್ಲಿದೆ. ಚೌಂಡರಸನು ಸುಬಾಹುವಿನ ನಗರವನ್ನು ಅನಂತನಿಧಿಪಟ್ಟಣವೆಂದೂ ಕೆಲವು ದಿನಗಳಮೇಲೆ ರಾಜಮಾತೆಗೆ ಸೈರಂಧ್ರಿಯು ತನ್ನ ಅಕ್ಕನ ಮಗಳೆಂಬ ವಿಷಯವು ತಿಳಿಯಿತೆಂದೂ ದಮಯಂತಿಯು ಅನಂತನಿಧಿ ಪಟ್ಟಣದ

ಲ್ಲಿರುವ ವಿಚಾರವನ್ನು ಭೀಮರಾಜನು ಬ್ರಾಹ್ಮಣನಿಂದ ತಿಳಿದು ಅವಳನ್ನು ಕರೆಸಿದನೆಂದೂ ವ್ಯತ್ಯಾಸಮಾಡಿರುವನು.

ಇಲ್ಲಿ ಹೆಂಗಸು ಸ್ವತಂತ್ರಿಸಿ ವರ್ತಿಸುವುದು ನ್ಯಾಯವಲ್ಲವೆಂದೂ, ಎಲ್ಲ ಸಂಪತ್ತನ್ನೂ ಕಳೆದುಕೊಂಡು ಪತಿಯಿಂದಲೂ ತ್ಯಕ್ತಳಾದ ದಮಯಂತಿಯನ್ನು ತಂದೆಯೂ ಅಲ್ಲಗಳೆಯಬಹುದು ಎಂದು ಯೋಚಿಸಿಯೋ ತಂದೆಯು ಕರೆಸಿದಮೇಲೆ ದಮಯಂತಿಯು ಹೋದಳೆಂದೂ ಕವಿಯು ವ್ಯತ್ಯಾಸ ಮಾಡಿರಬಹುದು.

ಭಾರತದಲ್ಲಿ ದಮಯಂತಿಯು ಚೇದಿಪಟ್ಟಣವನ್ನು ಸೇರಿದಳೆಂಬ ಕಥಾಭಾಗವನ್ನು ಹೇಳಿದಮೇಲೆ ನಳನು ಕಾರ್ಕೋಟಕನಿಂದ ಕಚ್ಚಲ್ಪಟ್ಟು ಆದರ ಸಲಹೆಯಂತೆ ಬಾಹುಕನೆಂಬ ಹೆಸರಿನಿಂದ ಋತುಪರ್ಣನ ಅಶ್ವಶಾಲಾಧ್ಯಕ್ಷನಾದನೆಂದಿರುವುದನ್ನು, ದಮಯಂತಿಯು ಕುಂಡಿನ ನಗರಿಯನ್ನು ಸೇರಿದಳೆಂಬ ಕಥೆಯನ್ನು ಹೇಳಿದಮೇಲೆ ನಳನು ಋತುಪರ್ಣನ ಅಶ್ವಶಾಲೆಯಲ್ಲಿ ವಾಜಿಸೇವಾಜೀವಿಯಾದನೆಂದು ವ್ಯತ್ಯಾಸಮಾಡಿ ಹೇಳಿರುವನು. ಬಾಹುಕನು, ತಾನು ಪಾಕಶಾಸ್ತ್ರದಲ್ಲಿಯೂ ನಿಪುಣನೆಂದು ಋತುಪರ್ಣನಿಗೆ ತಿಳಿಸಿದನೆಂದೂ ದಮಯಂತಿಯನ್ನು ನಿತ್ಯವೂ ಸ್ಮರಿಸಿ ಹಲುಬುತ್ತಿದ್ದನೆಂದೂ ಭಾರತದಲ್ಲಿರುವುದು ಈ ಕೃತಿಯಲ್ಲಿಲ್ಲ.

ನಳನ ಸಾರಥಿಯಾಗಿದ್ದ ವಾರ್ಷ್ಣೇಯನೇ ಋತುಪರ್ಣನ ಅಶ್ವಶಾಲೆಯಲ್ಲಿ ಯಜಮಾನನಾಗಿದ್ದನೆಂದು ಭಾರತದಲ್ಲಿದೆ. ಈ ಅಂಶವು ನಳಚಂಪುವಿನಲ್ಲಿಲ್ಲ. ತನ್ನ ಸಾರಥಿಯ ಕೈಕೆಳಗೆ ತಾನು ಸೇವಕನಾಗಿರುವುದು ಸರಿಯಲ್ಲವೆಂದು ತಿಳಿದು ಕವಿಯು ವಾರ್ಷ್ಣೇಯನ ಹೆಸರನ್ನು ಇಲ್ಲಿ ಪ್ರಸ್ತಾಪಿಸಿಲ್ಲ. ಋತುಪರ್ಣನು ಕುಂಡಿನ ನಗರಿಗೆ ಹೊರಟಾಗ ವಾರ್ಷ್ಣೇಯನೂ ಅವನೊಡನೆ ಹೊರಟನೆಂದು ಭಾರತದಲ್ಲಿರುವುದು ಈ ಕೃತಿಯಲ್ಲಿಲ್ಲ.

ಪರ್ಣಾದನೆಂಬ ಬ್ರಾಹ್ಮಣನು ಋತುಪರ್ಣನ ಆಸ್ಥಾನದಲ್ಲಿ ದಮಯಂತಿಯ ವಾಕ್ಯಗಳನ್ನು ಹೇಳಲು, ಅದಕ್ಕೆ ಯಾರೂ ಉತ್ತರಕೊಡುವುದಿಲ್ಲ. ಪರ್ಣಾದನು ರಾಜಸಭೆಯಿಂದ ಹೊರಕ್ಕೆಬಂದಾಗ ಬಾಹುಕನು ಅವನನ್ನು ಕರೆದು 'ವೈಷಮ್ಯಮಪಿ ಸಂಪ್ರಾಪ್ತಾ ಗೋಪಾಯಂತಿ ಕುಲಸ್ತ್ರಿಯಃ' ಎಂದೂ 'ರಹಿತಾ ಭರ್ತೃಭಿಶ್ಚೈವ ನ ಕುಪ್ಯಂತಿ ಕದಾಚನ' ಎಂದೂ ಅವನಿಗೆ ಹೇಳಿ ಕಳುಹಿಸುವನು. ಇದನ್ನು ಪರ್ಣಾದನು ದಮಯಂತಿಗೆ ತಿಳಿಸಿದನೆಂದು ಭಾರತದಲ್ಲಿದೆ. ಈ ಕಥಾಭಾಗವು ನಳಚಂಪುವಿನಲ್ಲಿ ಈ ರೀತಿ ಇದೆ :

ಬ್ರಾಹ್ಮಣ ವೇಷಧಾರಿಯಾದ ಚಾರನೊಬ್ಬನು ಮಂದುರಶಾಲೆಯ ಬಾಗಿಲಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದನು.' ಬಾಹುಕನು ಅಲ್ಲಿಗೆ ಬಂದು ಅವನನ್ನು, ನೀನು ಯಾರು? ಎಲ್ಲಿಂದ? ಏಕೆ ಬಂದೆ? ಎಂದು ಕೇಳಿದನು.

ಅದಕ್ಕೆ ದೂತನು ಅಡವಿಯಲ್ಲಿ ನಳನೆಂಬ ಮಹಾತ್ಮನು ತನ್ನ ಸತಿಯನ್ನು ನಿದ್ರಿಸುತ್ತಿರುವಾಗ ಬಿಟ್ಟುಹೋದನು. ಅವನನ್ನು ಹುಡುಕಲು ಆತನ ಮಡದಿ ನನ್ನನ್ನು ಕಳುಹಿಸಿರುವಳು. ನಾನು ತಿರುಗಿ ತಿರುಗಿ ಅವನನ್ನು ಒಂದೆಡೆಯಲ್ಲೂ ಕಾಣದೆ ಈಗತಾನೇ ಇಲ್ಲಿಗೆ ಬಂದಿರುವೆನೆಂದು ಹೇಳು ವನು. ಅದಕ್ಕೆ ಬಾಹುಕನು 'ಕಾಂತನನಟಿಸಲ್ ಸ್ತ್ರೀ ಸ್ವಾತಂತ್ರ್ಯದಿ ನಟ್ಟುವರುಮೊಳರೇ' ಎಂದು ಹೇಳಿ ಹೋದ ಸುದ್ದಿಯನ್ನು ಆ ದೂತನು ದಮಯಂತಿಗೆ ತಿಳಿಸುವನು.

"ದಮಯಂತಿಯು ಪರ್ಣಾದನಿಂದ ತಿಳಿದ ಸಮಾಚಾರವನ್ನು ತನ್ನ ತಾಯಿಗೆ ತಿಳಿಸುವಳು. ತಂದೆಗೆ ತಿಳಿಯಪಡಿಸದೆ ತಾಯಿಯ ಒಪ್ಪಿಗೆಪೆತ್ತು ಸುನಂದನನ್ನು ಅಯೋಧ್ಯೆಗೆ ಕಳುಹಿಸುವಳು. ಅವನು, ದಮಯಂತಿಯು ಹೇಳಿ ಕಳುಹಿಸಿದಂತೆ ಋತುಪರ್ಣನ ಆಸ್ಥಾನದಲ್ಲಿ 'ದಮಯಂತಿಗೆ ನಾಳೆ ಬೆಳಗ್ಗೆ ಪುನಸ್ಸ್ವಯಂವರವು' ಎಂದು ತಿಳಿಸುವನು. ರಾಜನು ಬಾಹುಕ ನನ್ನು ಬರಮಾಡಿ 'ಬಾಹುಕನೇ! ನಾಳೆ ಬೆಳಗ್ಗೆ ದಮಯಂತಿಗೆ ಪುನ ಸ್ಸ್ವಯಂವರವೇರ್ಪಟ್ಟಿರುವುದರಿಂದ ಅಷ್ಟರೊಳಗೆ ನನ್ನನ್ನು ವಿದರ್ಭನಗ ರಕ್ಕೆ ಒಯ್ಯಬಲ್ಲೆಯಾ?' ಎಂದು ಕೇಳಲು, ದಮಯಂತಿಯ ಪುನಸ್ಸ್ವಯಂ ವರದ ಸುದ್ದಿಯನ್ನು ಕೇಳಿದ ಬಾಹುಕನು ಭ್ರಾಂತನೂ ದುಃಖಿತನೂ ಆಗುವನು. ಸ್ವಲ್ಪ ಹೊತ್ತಿನಮೇಲೆ ಸಮಾಧಾನಚಿತ್ತನಾಗಿ ತಾನೂ ರಾಜನೊಡನೆ ಹೋಗುವುದರಿಂದ ನಿಜವಾದ ಅಂಶವು ತಿಳಿಯುವುದೆಂದು ಯೋಚಿಸಿ ರಾಜನಿಗೆ ತಮ್ಮ ಅಪ್ಪಣೆಯಂತೆ ನಡೆಯುವೆನೆಂದು ಹೇಳಿ ಪ್ರಯಾಣಕ್ಕೆ ರಥವನ್ನು ಸಿದ್ಧಪಡಿಸುವನು. ಬಾಹುಕನೊಡನೆ ವಾರ್ಷ್ಣೇ ಯನೂ ರಥದಲ್ಲಿ ಕುಳಿತುಕೊಳ್ಳುವನು. ರಾಜವಾರ್ಷ್ಣೇಯಬಾಹುಕರು ಕುಂಡಿನ ಪುರಿಗೆ ಪ್ರಯಾಣಮಾಡುವರು" ಎಂದು ಭಾರತದಲ್ಲಿದೆ. ಇದನ್ನು ಚೌಂಡರಸನು ಈ ರೀತಿ ಮಾರ್ಪಾಟು ಮಾಡಿರುವನು. ಚಾರನು ದಮ ಯಂತಿಗೆ ಅಯೋಧ್ಯೆಯಲ್ಲಿ ನಡೆದ ಸಮಾಚಾರವನ್ನು ತಿಳಿಸಲು, ಅವಳು ಬ್ರಾಹ್ಮಣನೊಬ್ಬನನ್ನು ಋತುಪರ್ಣನ ಆಸ್ಥಾನದಲ್ಲಿ ದಮಯಂತಿಗೆ ಪುನ ಸ್ಸ್ವಯಂವರವೆಂದು ತಿಳಿಸುವಂತೆ ಹೇಳಿಕಳುಹಿಸುವಳು. ಋತುಪರ್ಣನು ಪುನಸ್ಸ್ವಯಂವರದ ಸುದ್ದಿಯನ್ನು ಕೇಳಿ ತಾನು ಒಂದು ದಿನದೊಳಗೆ ಸಾವಿರಯೋಜನ ದೂರದಲ್ಲಿರುವ ಕುಂಡಿನ ನಗರಿಯನ್ನು ಸೇರುವುದು ಅಸಾಧ್ಯವೆಂದು ಚಿಂತಾಕ್ರಾಂತನಾಗಿರುವುದನ್ನು ತಿಳಿದು ರಾಜವಾಹಕನೂ ಚಿಂತಿಸುತ್ತ ಅಶ್ವಶಾಲೆಗೆ ಬರುವನು. ಬಾಹುಕನು ರಾಜವಾಹಕನನ್ನು ಚಿಂತೆಗೆ ಕಾರಣವೇನೆಂದು ಕೇಳಿ ತಿಳಿದು, ತಾನು ಸ್ವಯಂವರದ ವೇಳೆಗೆ ರಾಜನನ್ನು ಕುಂಡಿನ ನಗರಿಯನ್ನೈದಿಸುವೆನೆಂದು ಅವನಿಗೆ ಹೇಳುವನು. ರಾಜವಾಹಕನಿಂದ ಈ ವಿಚಾರವನ್ನು ತಿಳಿದ ರಾಜನು ಸಂತುಷ್ಟನಾಗಿ

ಪ್ರಯಾಣಸನ್ನದ್ಧನಾಗುವನು. ರಾಜಬಾಹುಕರಿಬ್ಬರೂ ಕುಂಡಿನ ಪಟ್ಟಣಕ್ಕೆ ಪ್ರಯಾಣಮಾಡುವರು.

ಇಲ್ಲಿ ಪರ್ಣಾದನು ಹೇಳಿದುದನ್ನು ಕೇಳಿ ಭೀಮರಾಜನು, ಉತ್ತರ ಕೊಟ್ಟವನು ತನ್ನ ಅಳಿಯನಲ್ಲವೆಂದು ಭಾವಿಸಿ ಉದಾಸೀನನಾಗಿರಲು, ದಮಯಂತಿಯೇ ಪುನಸ್ಸ್ವಯಂವರದ ಸುದ್ದಿಯನ್ನು ತಿಳಿಸುವಂತೆ ಒರ್ವ ಪಾರ್ವನನ್ನು ಅಯೋಧ್ಯೆಗೆ ಅಟ್ಟಿದಳೆಂದು ಕವಿಯು ಹೇಳಿರುವನು. ಮುಂದೆ ದಮಯಂತಿಯನ್ನು 'ಅದೇಂ ಮತಿವಂತೆಯೋ ದೀರ್ಘದರ್ಶಿಯೋ' ಎಂದೂ 'ಸತಿಬುದ್ಧಿ ಚತುರ್ಗುಣವಲ್ತೆ ಭಾವಿಸಲ್' ಎಂದೂ ಹೇಳಿರುವುದನ್ನು ಸಮರ್ಥಿಸುವುದಕ್ಕಾಗಿ ಈ ರೀತಿ ಹೇಳಿರಬಹುದು.

''ಕುಂಡಿನ ನಗರಕ್ಕೆ ಹೋಗುವಾಗ ಋತುಪರ್ಣನು ನಳನಿಗೆ ಅಕ್ಷವಿದ್ಯೆಯನ್ನು ಹೇಳಿಕೊಡುವನು; ಅಯೋಧ್ಯೆಗೆ ಹಿಂತಿರುಗುವಾಗ ಋತುಪರ್ಣನಿಗೆ ನಳನು ಅಶ್ವವಿದ್ಯೆಯನ್ನು ಉಪದೇಶಿಸುವನು'' ಎಂದು ಭಾರತದಲ್ಲಿದೆ. ನಳಚಂಪುವಿನಲ್ಲಿ—ಮೊದಲು ಋತುಪರ್ಣನು ಅಕ್ಷವಿದ್ಯೆಯನ್ನು ನಳನಿಗೆ ಹೇಳಿಕೊಡಲು ಅದಕ್ಕೆ ಪ್ರತಿಯಾಗಿ ನಳನು ಋತುಪರ್ಣನಿಗೆ ಆಗಲೇ ಅಶ್ವವಿದ್ಯೆಯನ್ನುಪದೇಶಿಸಿದನೆಂದಿರುವುದಲ್ಲದೆ, ತಾರೆಯ ಮರದಿಂದ ದಾಳ ಮಾಡಿ ಅದನ್ನು ಋತುಪರ್ಣನು ನಳನಿಗೆ ಕೊಟ್ಟನೆಂಬ ಅಂಶವೂ ಹೆಚ್ಚಾಗಿದೆ. ಋತುಪರ್ಣನಳರ ವಿದ್ಯಾವಿನಿಮಯದ ವಿಷಯದಲ್ಲಿ ಕವಿಯು ಮಾಡಿರುವ ಕಾಲಬದಲಾವಣೆಯು ನ್ಯಾಯವಾಗಿರುವುದು. ಭಾರತದಲ್ಲಿ ಋತುಪರ್ಣನು ನಿರಾಶೆಯಿಂದ ಊರಿಗೆ ಹಿಂತಿರುಗುವಾಗ ಅಶ್ವವಿದ್ಯೆಯನ್ನುಪದೇಶಿಸಿದನೆಂದು ಅಪ್ರಸಕ್ತಕಾಲದಲ್ಲಿ ಹೇಳಿರುವುದರಿಂದಲೇ ಕವಿಯು ಈ ರೀತಿ ವ್ಯತ್ಯಾಸಮಾಡಿರುವನು.

ಕವಿಯು ಪುನಸ್ಸ್ವಯಂವರದ ದಿನವೇ ಋತುಪರ್ಣನು ಕುಂಡಿನ ನಗರಿಗೆ ಬಂದನೆಂದು ತಿಳಿಸಿರುವನು; ಅಲ್ಲದೆ ನಳದಮಯಂತಿಯರ ಸೇರುವಿಕೆಯನ್ನೇ ಪುನಸ್ಸ್ವಯಂವರವೆಂದು ೭೩ಲ ಮತ್ತು ೭೩೬ ಪದ್ಯಗಳಲ್ಲಿ ಹೇಳಿರುವನು.

ಭಾರತದಲ್ಲಿ—''ಕುಂಡಿನ ನಗರಿಗೆ ಋತುಪರ್ಣನ ಬರುವಿಕೆಯಿಂದ ಭೀಮರಾಜನಿಗೆ ಆಶ್ಚರ್ಯವಾಗುವುದು. ಕುಶಲಪ್ರಶ್ನೆಗಳಾದಮೇಲೆ ಭೀಮನು ಋತುಪರ್ಣನನ್ನು ಆತನ ಬರವಿಗೆ ಕಾರಣವೇನೆಂದು ಪ್ರಶ್ನಿಸಲು, ನಗರದಲ್ಲಿ ಸ್ವಯಂವರಸಂಭ್ರಮವಾವುದೂ ಏರ್ಪಡದಿರುವುದನ್ನೂ ಮತ್ತೆ ಯಾವರಾಜರೂ ಬಂದಿಲ್ಲದುದನ್ನೂ ನೋಡಿ ಭ್ರಾಂತನಾದ ಋತುಪರ್ಣನು 'ನಿನ್ನನ್ನು ನೋಡಿ ಬಹಳ ದಿನಗಳಾದುವು; ನಮಸ್ಕರಿಸಿ ಹೋಗೋಣವೆಂದು ಬಂದೆ' ಎಂದು ತಿಳಿಸುವನು. ದಮಯಂತಿಯ ಪುನಸ್ಸ್ವಯಂವರತಂತ್ರದ ಅರಿವಿಲ್ಲದ ಭೀಮರಾಜನಿಗೆ ಋತುಪರ್ಣನ ಉತ್ತರವು ಸಮಂಜಸವಾಗದಿರಲು ಕಾರಣವು ತಾನೇ ತಿಳಿಯುವುದೆಂದರಿತು ರಾಜನನ್ನು ವಿಶ್ರಮಿಸಿ-

ಕೊಳ್ಳುವಂತೆ ಹೇಳಿ ಕಳುಹಿಸುವನು" ಎಂದಿರುವುದು. ನಳಚಂಪುವಿನಲ್ಲಿ–ಭೀಮಋತುಪರ್ಣರ ಭೇಟಿಯಾಗಲೀ ಸಂಭಾಷಣೆಯಾಗಲೀ ವರ್ಣಿತವಾಗಿಲ್ಲ. ದಮಯಂತಿಯ ಕೆಳದಿಯು ಅವಳಿಗೆ "ಸಾರಥಿಯೊಡನೆ ನಿನ್ನಾಕಾಂಕ್ಷೆಯಿಂದ ರಾಜನೊಬ್ಬನು ಇಲ್ಲಿಗೆ ಬಂದಿರುವನೆಂದು ತಿಳಿಸಿ, ಅವಳ ಅಪ್ಪಣೆಯಂತೆ ಅವರನ್ನು ಒಂದು ಬಿಡುದಾಣಕ್ಕೆ ಕಳುಹಿಸಿ ಬಂದು ದಮಯಂತಿಗೆ ಸಾರಥಿಯ ವಿಕಾರರೂಪವನ್ನು ತಿಳಿಸುವಳು" ಎಂದಿದೆ.

ಭಾರತದಲ್ಲಿ, ಬಾಹುಕನು ಋತುಪರ್ಣನಿಗಾಗಿ ಮಾಡಿದ ಅಡಿಗೆಯಲ್ಲಿ ಸ್ವಲ್ಪಭಾಗವನ್ನು ಬಾಹುಕನಿಗೆ ತಿಳಿಯದಂತೆ ಕೆಳದಿಯಿಂದ ತರಿಸುವಳೆಂದಿರುವುದನ್ನು, ಚೌಂಡರಸನು––ದಮಯಂತಿಯೇ ತನಗೆ ಬೇಕೆಂದು ಕೇಳಿ ತರುವಂತೆ ಕೆಳದಿಯನ್ನು ಕಳುಹಿಸುವಳೆಂದು ಹೇಳಿರುವನು.

ಬಾಹುಕನು ನಳನೇ ಎಂದು ದಮಯಂತಿಗೆ ದೃಢಪಟ್ಟಮೇಲೆ ಆತನ ರೂಪದಿಂದುಂಟಾದ ಸಂಶಯವನ್ನು ನೀಗಲು, ಅವನನ್ನು ತಾನು ಎದುರಿನಲ್ಲೇ ನೋಡಬೇಕೆಂದು ನಿಶ್ಚೈಸಿ, ತನ್ನ ತಾಯಿಯ ಅನುಮತಿಯನ್ನು ಪಡೆದು, ಬಾಹುಕನನ್ನು ತನ್ನ ಸಮೀಪಕ್ಕೆ ಕರೆಸುವಳೆಂದು ಭಾರತದಲ್ಲಿರುವ ಈ ಸಂವಿಧಾನದಲ್ಲಿ, ತಾಯಿಯ ಅನುಮತಿಯನ್ನು ಪಡೆಯುವ ಅಂಶವು ನಳಚಂಪುವಿನಲ್ಲಿಲ್ಲ.

ಬಾಹುಕನು ತಾನೇ ನಳನೆಂದು ದಮಯಂತಿಗೆ ತೋರ್ಪಡಿಸಿಕೊಂಡ ಮೇಲೆ ಅವನು "ಎಲೆ ದಮಯಂತಿ! ನನ್ನನ್ನು ಆವರಿಸಿದ್ದ ಕಲಿಯು ಬಿಟ್ಟು ಹೋಗಲು, ಕಷ್ಟವು ಸಮಾಪ್ತಿಯಾಗುವ ಕಾಲವಾದುದರಿಂದಲೇ ನಾನು ಇಲ್ಲಿಗೆ ಬಂದಿರುವೆನು. ಲೋಕದಲ್ಲಿ ಬೇರೆ ಯಾವ ಹೆಣ್ಣೇ ಆಗಲಿ ತನ್ನನ್ನು ಪ್ರೀತಿಸುವ ನಲ್ಲನನ್ನು ಬಿಟ್ಟು ನಿನ್ನಂತೆ ಬೇರೊಬ್ಬನನ್ನು ವರಿಸಲಿಚ್ಛಿಸುವಳೇ? ನಿನ್ನ ತಂದೆಯ ಆಜ್ಞೆಯಂತೆ ದೂತರು ದಮಯಂತಿಗೆ ಪುನಸ್ಸ್ವಯಂವರವೆಂದು ಎಲ್ಲಾ ದೇಶಗಳಲ್ಲೂ ಹೇಳುತ್ತಿರುವರು. ಇದನ್ನು ಕೇಳಿಯೇ ಋತುಪರ್ಣನು ಇಲ್ಲಿಗೆ ಬಂದಿರುವನು" ಎನ್ನುವನು. ಆಗ ದಮಯಂತಿಯು ನಡುಗುತ್ತ "ನಾನು ಮನಸ್ಸಿನಲ್ಲಿಯೂ ಮತ್ತೊಬ್ಬನನ್ನು ನೆನೆದವಳಲ್ಲ. ನಿನ್ನನ್ನು ಇಲ್ಲಿಗೆ ಬರಮಾಡುವುದಕ್ಕಾಗಿಯೇ ಈ ತಂತ್ರವನ್ನು ಹೂಡಿದುದು. ಚಾರರು ಋತುಪರ್ಣನ ಆಸ್ಥಾನದಲ್ಲಿ ಮಾತ್ರ ಪುನಸ್ಸ್ವಯಂವರದ ಸುದ್ದಿಯನ್ನು ತಿಳಿಸಿರುವರು. ಇದಕ್ಕೆ ಲೋಕಸಂಚಾರಿಗಳಾದ ಸೂರ್ಯ–ವಾಯುಗಳೇ ಸಾಕ್ಷಿ" ಎಂದು ತಿಳಿಸುವಳು. ಆಗ ನಳನು ದಮಯಂತಿಯನ್ನು ಪರಿಗ್ರಹಿಸುವನು. ನಳ–ದಮಯಂತಿಯರು ತಾವು ಪಟ್ಟ ಕಷ್ಟಗಳನ್ನು ಪರಸ್ಪರ ಹೇಳಿಕೊಳ್ಳುತ್ತಾ ರಾತ್ರಿಯನ್ನು ಕಳೆಯುವರು. ಬೆಳಗ್ಗೆ ಮಂಗಳಸ್ನಾನವಾದಮೇಲೆ ಭೀಮರಾಜನನ್ನು ದಂಪತಿಗಳು ನಮಸ್ಕರಿಸುವರು.

ರಾಜನು ಅಳಿಯನನ್ನು ಉಚಿತಾಸನಾದಿಗಳಿಂದ ಸತ್ಕರಿಸುವನೆಂದು ಭಾರತದಲ್ಲಿದೆ. ಈ ಕಥಾಸನ್ನಿವೇಶವನ್ನು ಚೌಂಡರಾಜನು ಈ ರೀತಿ ಮಾರ್ಪಾಡು ಮಾಡಿರುವನು. "ದಮಯಂತಿಯು ಬಾಹುಕನನ್ನು ಪರೀಕ್ಷಿಸಿ ಅವನೇ ನಳನೆಂದು ನಿಶ್ಚೈಸಿ ಅವನನ್ನು ತನ್ನ ಸಮೀಪಕ್ಕೆ ಬರಮಾಡುವಳು. ಬಾಹುಕನನ್ನು ಕಂಡು ಬಾಷ್ಪನೇತ್ರಗಳಿಂದ ಕೂಡಿ, "ರಾಜನೇ! ನನ್ನಲ್ಲಿ ಕೋಪಿಸದೆ ಬಾಹುಕವೇಷವನ್ನು ಬಿಟ್ಟು ನಿಜರೂಪವನ್ನು ತಾಳಿ ದುಃಖಿಸುತ್ತಿರುವ ನನ್ನನ್ನು ಕಾಪಾಡು" ಎಂದು ಅವಳು ಪ್ರಾರ್ಥಿಸುವಳು. ಆಗ ಬಾಹುಕನು, ಕಾರ್ಕೋಟಕನು ಕೊಟ್ಟ ವಸ್ತ್ರವನ್ನು ಹೊದೆದ ಕೂಡಲೆ ನಳನಾಗುವನು. ದಮಯಂತಿಯು ನಳನ ಕಾಲಿನಮೇಲೆ ಬಿದ್ದು 'ವಲ್ಲಭೆಯಾದ ನನ್ನನ್ನು ನೀನು ಈ ರೀತಿ ಮರೆಯಬಹುದೇ?' ಎಂದು ಕಣ್ಣೀರಿನಿಂದ ಅವನ ಪಾದಪದ್ಮಗಳನ್ನು ತೊಳೆಯುವಳು. ಅನಂತರ ನಳನು ದಮಯಂತಿಯೊಡನೆ ಇರುವ ಸುದ್ದಿಯನ್ನು ಕೇಳಿದ ಭೀಮರಾಜನು ಅಲ್ಲಿಗೆ ಬಂದು ಅವರ ಸಂತೋಷದಲ್ಲಿ ತಾನೂ ಭಾಗಿಯಾಗಿ ಅಳಿಯನ ವೃತ್ತಾಂತವನ್ನು ಬೆಸಗೊಳ್ಳುವನು.

ಇಲ್ಲಿಂದ ಮುಂದಿನ ಕಥಾಭಾಗದಲ್ಲಿ ಭಾರತಕ್ಕೂ ನಳಚಂಪುವಿಗೂ ವ್ಯತ್ಯಾಸವು ಕಂಡುಬರುವುದಿಲ್ಲ.

ಇದರಿಂದ ಚೌಂಡರಾಜನ ಕೃತಿಗೆ ಭಾರತದ ಉಪಾಖ್ಯಾನವೇ ಮುಖ್ಯವಾದ ಮೂಲವೆಂದು ಹೇಳಬಹುದು.

———

# ವಿಷಯ ಸೂಚೀ

---

# ಒಪ್ಪೋಲೆ

| ಪದ್ಯ | ಸಾಲು | ತಪ್ಪು | ಒಪ್ಪು |
|---|---|---|---|
| ೧೦ | ೨ | ನೀತಿಕಲಾ | ನೀತಿ ಕಲಾ |
| ೨೦ | ೪ | ಕಳುಪಲ್ | ತಳರಲ್ |
| ೨೭ | ೪ | ನಲ್ತ್ | ನಲ್ತೀ |
| ೪೨ | ೪ | ದಾಗಳವನೀ | ದವನಿ ಭೀ |
| | | ತಿಲಕಾ | [ಮಾತ್ಮಜೆಯಾ] |
| ೫೬ | ೨ | ಚರ್ಂದವೆ | ಚರ್ಂ ದವ |
| ೬೭ | ೨ | ವಗ್ಗಡ | ವುಗ್ಗಡ |
| ೭೮ | ೩ | ಸ್ಯೆಕನೆ | ಸ್ಯೆತನೆ |
| ,, | ೪ | ವಲ್ಲವೆ | ವಲ್ಲವೇ |
| ೮೦ | ೩ | ತಿರ್ಪಂ | ತಿರ್ಪಾ |
| ,, | ೪ | ಯ್ತೊ | ಯ್ತೋ |
| ೯೯ | ೨ | ನಿಟ್ಟು | ನೀಟ್ಟು |
| ೧೦೬ | ೪ | ತಿಲಕ | ತಿಲಕಾ |
| ೧೫೮–೫೯ | ೪ | ಳಾಕ್ಷಿ | ಳಾಕ್ಷೀ |
| ೧೬೩ | ೨ | [ವನ] | [ನುವ] |
| ೧೭೩ | ೨ | ನೊಳ್ಪಡ | ನೊಳ್ಪಡೆ |
| ೧೭೪ | ೨ | ವತಿ | ಪತಿ |
| ೧೮೧ | ೨ | ಚಿತ್ರ | ಚಿತ್ತ |
| ೨೩೪ | ೩ | ವಪ್ಪೊಲ್ | ವಪ್ಪೊಳ್ |
| ,, | ೪ | ಪದ | ಪಥ |
| ೨೫೮ | ೨ | ಮೇಘ | ಮೇಷ |
| ,, | ,, | ಮೊಪ್ಪಿ | ಮೊಪ್ಪೆ |
| ೨೬೧ | ೪ | ಭೂಪಾಲ | ಭೂಪಾಲಾ |
| ೨೭೩ | ೧ | ಸವ್ಯಾನ | ಸಂವ್ಯಾನ |
| ೩೨೧ | ೩ | ತಗಡಂ | ತಗದಂ |
| ೩೬೨ | ೪ | ಬಿನಲ | ಬೆನಲ |
| ೩೯೪ | ೩ | ಗಿರ್ವರೆಂ | ಗರ್ರಿದೆಂ |

| ಪದ್ಯ | ಸಾಲು | ತಪ್ಪು | ಒಪ್ಪು |
|---|---|---|---|
| ೪೧೬ | ೧ | ನಲ್ಲದೆ | ನಲ್ಲವೆ |
| ೪೨೩ | ೧ | ನೆಲಸಿ | ನೆಲಸೆ |
| ,, | ೨ | ಪರನಾರಿ | ವರನಾರಿ |
| ೪೨೫ | ೨ | ಬಿಡಿಲ | ಬಿಡಿ |
| ೪೩೪ | ೧ | ಜ್ಜ್ವಲಿಸಿ | ಜ್ಜ್ವಲಿಸೆ |
| ೪೪೫ | ೪ | ಯಿಂ[ದೆ]ನಿಬ್ಬಣ | ಯಿಂ ನಿಬ್ಬಣ[ದ] |
| ೪೬೯ | ೪ | ದಿನೆತ್ತಿನಿವಾ | ದಿಂದೆತ್ತಿನಿವ |
| ೪೭೪ | ೩ | ಕುರಳ್ಗೆ | ಕುರುಳ್ಗೆ |
| ೫೪೩ | ೨ | ಕಾಱಿ | ತಾಱಿ |
| ೫೮೫ | ೪ | ಯೊವ್ವದ | ಯೊಪ್ಪದ |
| ೬೭೨ | ೨ | ವಾರ್ಥೈ | ದಾರ್ಥೈ |
| ೬೭೯ | ೩ | ಚ್ಛಕೀಯ | ಚ್ಛಕಾಯ |
| ೬೮೮ | ೩ | ಬೀಳಲ್ | ಬೀೞಲ್ |
| ೬೯೮ | ೩ | ಜಗಂನುತಿ | ಜಗನ್ನುತಿ |
| ೭೩೭ | ೪ | [1] ಪರೀಕ್ಷ್ಯಳಲ್ಲವೇ [1] | ಪರಿಕ್ಷ್ಯ[1]ಳಲ್ಲವೇ [1] |
| ೭೩೮ | ೩ | ವಿಲಸತ್ಕಿರೀ | ವಿಲಸಚ್ಛಿರೀ |
| ೭೪೪ | ೧ | ವೆಲ್ಲಿ | ವಲ್ಲಿ |
| ೭೫೪ | ೩ | ಕರಿ | ಕಲಿ |
| ೭೫೯ | ೨ | ನೇಯರ್ಥ | ನೀಯರ್ಥ |

## ಸೂಚಿತ ಪಾಠಗಳು

| ಪದ್ಯ | ಸಾಲು | ಇರುವುದು | ಸೂಚಿತ |
|---|---|---|---|
| ೧ | ೨ | ಕದನ | ಮದನ |
| ,, | ೩ | ವೆತ್ತು | ವೆತ್ತ |
| ೨ | ೩ | ಮದಾಳಿ | ಮರಾಳಿ |
| ೫ | ೧ | ಗುಣಮೇಂ | ಗುಣಮುಂ |
| ಪುಟ ೨ ವಚನ | ೧ | ಭೋಗ | ಭೋಗಿ |
| ೧೧ | ೪ | ಬಣ್ಣಿಸಲ್ಕೆಱೆವ ನೇಸಿರ್ದಂ ಚತುಃ ಪ್ರೌಢಿಯಂ | ಬಣ್ಣಿಸಲ್ ನೆಱೆ ವನೇನಿರ್ದಂ ಚತುಃ ಪ್ರೌಢಿಯಿಂ |
| ೧೨ | ೨ | ಮೆನಿಪ | ಮಧಿಕ |
| ೧೬ | ೨ | ತೆಂಗು | ಕೇಗು |
| ೧೭ | ೨ | ನಧಿಕ | ನದಟ |
| ೧೯ | ೨ | ಬಾಲ್ಯವನಂ | ಬಾಲ್ಯವಯಂ |
| ೨೧ | ೨ | ದುಟಿದರೆರ್ದೆ | ದುಟಿಯಲೆರ್ದೆ |
| ೨೭ | ೩ | ನಿಜ | ಚಯ |
| ೨೯ | ೧ | ಚಿತ್ತ | ವಿತ್ತ |
| ೩೫ | ೧ | ಬಡಿ | ಪಿಡಿ |
| ೪೩ | ೧–೨ | .... | [ನೆಲೆವನೆ ವರಶೋಭಾ] |
| ೪೫ | ೨ | ವೆಸದಾ | ವಶದಾ |
| ,, | ೪ | ಕ್ರಮ | ಕ್ರಮಿ |
| ೫೦ | ೩ | ಪದಂ | ಕೊಳಂ |
| ೫೫ | ೨ | ನಲರ್ಗೆ | ನಲರ |
| ೬೮ | ೧ | ಮಿಡಿಗೆ | ಪಿಡಿಗೆ |
| ೮೪ | ೧ | ನಗೆಯಂ | ನಗೆಯುಂ |
| ೮೬ | ೪ | ಮೆನಿಸುದುದಾ | ಮೆನಿಸುದುಪಾ |
| ೮೭ | ೪ | ದ್ರುಮು | ದ್ರುವ |
| ೮೮ | ೨ | ನುಂಡುಸು | ನುಂಡನು |
| ,, | ,, | ಮೋ | ಮೋ |
| ೮೮ | ೩ | ಯಲ್ಕೆ | ಯುತ್ತೆ |
| ೮೯ | ೧ | ದ.... | ದು [ಱುಂಗಲ್] |

| ಪದ್ಯ | ಸಾಲು | ಇರುವುದು | ಸೂಚಿತ |
|---|---|---|---|
| ೯೦ | ೨ | ತೊಳೆ | ಕಳೆ |
| ೯೬ | ೩ | ಸಾರಥಿಗೊ | ಸಾರದಿನೊ |
| ೯೯ | ೪ | ವಂದದಿಂ | ದಂದದಿಾ |
| ೧೨೧ | ೪ | ದುದ್ಧತ | ದುದ್ಗತ |
| ೧೨೪ | ೧ | ಕಡು | ಕುಡು |
| ೧೩೦ | ೩ | ಕರ | ತರ |
| ೧೩೨ | ೨ | ಕರ್ಪೆಡೆ | ಕರ್ಪಡ |
| ೧೩೯ | ೧ | ಗಿಂಡುಬಲ್ಪಿಗೆ | ಯಿಂದುವೊಲ್ಲೆಕು |
| ೧೪೩ | ೩ | ಮಿಾಱು | ಮೂಱು |
| ೧೪೮ | ೩ | [ನೆನೆಗೊಂ] | [ಪೆಸರ್ಗೊಂ] |
| ೧೬೪ | ೧ | ನನ್ನವನಂಟ | ನಂಬುವನೀಂಟ |
| ೧೬೮ | ೨ | [ವನದಂ] | [ದಿನಿದಂ] |
| ೧೬೯ | ೧ | ದಿಂತಳಂ | ದಿಂಗಳಂ |
| ೧೭೩ | ೨ | ಭೂಪಂ | ಭೂತಂ |
| ೧೭೮ | ೨–೩ | ಗಳ್ಗೆನಿಂ।ತೇ | ಗಳ್ಗಿನಿ!ತ್ತೇ |
| ೧೯೨ | ೪ | ಲ್ಲವೇಂ | ಲ್ಲವೋ |
| ೧೯೫ | ೨೫ | ನಳದವೆುಂ | ನಳನದೆಂ |
| ೨೦೫ | ೨ | ನುಳ್ಳ | ಮುಳ್ಳ |
| ೨೨೦ | ೪ | ತರಿಸೌ | ದಿತರೌ |
| ೨೪೪ | ೨ | ಶೂಕ | ಶ್ರೈವ |
| ೨೫೩ | ೪ | ವರ್ಗಕ್ಕೆ | ವಾರ್ಗಕ್ಕೆ |
| ೨೬೮ | ೨ | ವೇನು | ವೇಕೆ |
| ೨೭೮ | ೨ | ಕಾವಾರ್ಥರ್ | ಕಾವಾರ್ತರ್ |
| ೨೯೮ | ೧ | ನಯ್ಯ್ವ | ರಯ್ಯ್ವ |
| ೩೧೨ | ೩ | ಬರೆ | ನರೆ |
| ೩೧೭ | ೩ | ದಯ | ನಯ |
| ೩೨೩ | ೪ | ಭಾವಸ್ಥಿ | ಭಾ ಪ್ರಸ್ರು |
| ೩೪೦ | ೧ | ಸರಸತಿ | ವರಸತಿ |
| ೩೭೭ | ೩ | ಬಾಳ | ಲಾಳ |
| ೩೭೯ | ೧ | ಕೋಪದೊ | ಕೋಪದ |
| ೩೯೨ | ೧ | ಮೆಱಸು | ವೆಱಸು |
| ೪೦೮ | ೨ | ಬಟ್ಟೆಯ | ಬಟ್ಟೆಯಿ |
| ,, | ೩ | ಪೋಳೆಂ | ಘೊಳ್ಗೆಂ |

| ಪದ್ಯ | ಸಾಲು | ಇರುವುದು | ಸೂಚಿತ |
|---|---|---|---|
| ೪೧೫ | ೪ | ತದರಟ್ಟಿ | ತದಟಟ್ಟಿ |
| ೪೨೬ | ೨ | ಸರೋಜ | ಶಿರೋಜ |
| ೪೮೯ | ೨ | ಭರ | ಭವ |
| ೫೧೧ | ೩ | ಕುನತಿ | ಕುನಯ |
| ೫೧೫ | ೪ | ತನವಂಗ | ತನದಂಗ |
| ೫೨೦ | ೩ | ವೃದ್ಧ | ಗೃಧ್ರ |
| ೫೨೪ | ೪ | ತಳೆದಂ | ಕಳೆದಂ |
| ೫೭೦ | ೨ | ವನೇಕೆ | ವದೇಕೆ |
| ೫೭೫ | ೨ | ನೀಶ್ವರ | ನೀಸುರ |
| ೫೮೬ | ೪ | ಬಿಲ್ಲಬೇಂ | ಭಿಲ್ಲವೇಂ |
| ೫೯೫ | ೪ | ನಿದಾ೯ವ | ನೀದಾ೯ಣ |
| ೬೧೫ | ೧ | ಪರ | ದರ |
| ೬೨೦ | ೩–೪ | ಸುಂದರ | ದೊಂದಿರ |
| ೬೨೧ | ೧ | ಪೊಣ್ಮಿ | ಪೊಣ್ಮೆ |
| ,, | ೨ | ಯೇಱ | ಯೇಱೆ |
| ೬೨೨ | ೧ | ವನ | ನವ |
| ೬೨೯ | ೩ | ಮಿಳಿರ್ನಾ | ಮಿಳನ್ನಾ |
| ೬೩೮ | ೩ | .... | [ಪ್ಪುವ] |
| ೬೪೩ | ೪ | ಯೆಲ್ಲಿ | ಯಲ್ಲಿ |
| ೬೪೭ | ೩ | ಲ್ದಿಂದು | ಲ್ದಂದು |
| ೬೫೩ | ೩ | ಬುದ್ಧಿ | ಋದ್ಧಿ |
| ೬೬೩ | ೨ | ಗುಂಡಿ | ಗಂಡಿ |
| ಪುಟ ೧೧೫ ವಚನ | ೨ | ಕಳಿಪವ | ಕಳಿಪ[ಲ]ವ |
| ೭೨೨ | ೨ | ನಾಗಲ್ | ನಾಗಳ್ |
| ೭೩೦ | ೩ | ವಲ್ಲಭೆ | ವಲ್ಲಭ |
| ೭೪೧ | ೧ | ಸದ್ವಿದ್ಯ | ಸದ್ವಿದ್ಯೆ |
| ೭೫೫ | ೪ | ಷ್ಕರಕಂ | ಷ್ಕರನಂ |
| ೭೬೨ | ೧ | ಸಪತ್ನರ | ವಸತ್ಯರ |
| ೭೬೪ | ೩ | ಬಿಟ್ಟ | ಬಿಟ್ಟೆ |
| ,, | ೪ | ಱಯಂ | ಱಯಾ |
| ೭೬೭ | ೩ | ಪಡೆದು | ಪಡೆದ |
| ೭೭೩ | ೩ | ಬಪ್ಪಳಂ | ಬಂದಳಂ |

ಚೌಂಡರಾಜಕೃತ

# ನಳಚಮ್ಪು



ಶ್ರೀಸತಿ ತನ್ನ ಪೇರುರಮನಾವಗಮುಪ್ಪಿರಲಂಘ್ರಿಯಂ ಧರಿ
ತ್ರೀಸತಿ ಸಾರ್ದಿರಲ್ ಕದನಮೋಹನಕೇಳಿಯನೊಲ್ದು ಸತ್ಯಭಾ ।
ಮಾಸತಿ ಪೆರ್ಚಿಸಲ್ ಸೊಬಗುವೆತ್ತು ಜಗತ್ಪತಿ ತನ್ನ ಮಾನಸೋ
ಲ್ಲಾಸದಿನೆಲ್ಲರಂ ಪೊರೆಗೆ ಮಂಗಳಮೂರ್ತಿಯಭಂಗವಿಟ್ಠಲಂ ॥೧॥

ಪ್ರಣುತಸುರಾಸುರಪ್ರಿಯವರಪ್ರದನೂರ್ಜಿತಶೇಷರತ್ನಕಂ
ಕಣನವನೀಜಲಾಗ್ನಿಮರುದಂಬರಸೋಮದಿವಾಕರಾತ್ಮಲ ।
ಕ್ಷಣನಿಜಮೂರ್ತಿಯದ್ರಿತನಯಾನನಪದ್ಮಮದಾಳಿ ದೇವರ
ಗ್ರಣಿ ಶಿವನೆಮ್ಮೊಳೀಗೆ ಸುಕವಿಸ್ತುತಕಾವ್ಯಮತಿಪ್ರಕಾಶಮಂ ॥೨॥

ಪರಶುಸೃಣಿಪ್ರದೀಪ್ತರದಮೋದಕರಾಜಿತಹಸ್ತನದ್ರಿಜಾ
ವರನಿಜಪುತ್ರನಿಂದ್ರಶಿಖಿಕಾಲಸುರಾರಿಜಲೇಶವಾಯುಋಶಂ ।
ಕರಸಖ ರುದ್ರವಂದ್ಯನಹಿಭೂಷಣನುನ್ನತಮೂರ್ತಿ ಮತ್ತಕುಂ
ಜರವದನಂ ಗಣೇಶನೆಮಗೀಗೆ ಮನೋರಥಕಾರ್ಯಸಿದ್ಧಿಯಂ ॥೩॥

ಘೋರವಿಶಾಲವಕ್ತ್ರೆ ಶಿಖಿನೇತ್ರೆ ಚತುರ್ಭುಜೆ ಚಂದ್ರಮೌಲಿ ದೈ
ತ್ಯಾರಿ ಭುಜಂಗಭೂಷಣೆ ಸುರಾಸುರಪೂಜ್ಯೆ ಮಹಾಭಯಂಕರಾ ।
ಕಾರೆ ಸಮಸ್ತಶಸ್ತ್ರಪರಿಶೋಭಿತೆ ಭಕ್ತಜನಪ್ರಸನ್ನೆ ವಿ
ಸ್ತಾರವಿಚಿತ್ರಮೂರ್ತಿ ಬನದಂಬಿಕೆ ಮಾಳ್ಕೆಮಗಿಷ್ಟಸಿದ್ಧಿಯಂ ॥೪॥

ಅಕ್ಷರಮಾತ್ರಮಂ ಬಯಸಿ ಕಲ್ತವರೊಳ್ ಗುಣಮೇಂ ಪ್ರಭಾವಮಂ
ಪಕ್ಷವಿಪಕ್ಷಮೆಂದು ಪರಿಭಾವಿಸದೇತೆಱದಿಂ ಪರೋಪಕಾ ।
ರಕ್ಷಮರಾಗಿ ಪುಟ್ಟಿದವರುಳ್ಳೊಡೆ ಕೈಮುಗಿದೆರ್ದು ಗಂಧಪು
ಷ್ಪಾಕ್ಷತೆಯಿಂದಲಂಕರಿಸಿ ವಂದಿಸಿ ಬಣ್ಣಿಸುವೆಂ ನಿರಂತರಂ ॥೫॥

ಸಂದಿಯರೊಂದಿ ಬಗ್ಗರ ಸಮಕ್ಷದೊಳಿದ್ದುರಿದೆದ್ದು ದುರ್ಜನಂ
ನಿಂದಿಸುತಿರ್ಪನುತ್ತಮರ ಕಾವ್ಯಮನಂತುಟು ದಲ್ ನಿರಂತರಂ ।

ಹಂದಿಗೆ ಮಿಂದನೀರ ಕೆಸಱೊಗ್ಗುವುದಲ್ಲದೆ ತಣ್ಪನೀವ ಸ
ಚ್ಚಂದನದಣ್ಪದೊಗ್ಗುವುದೆ ನೈಜಗುಣಕ್ಕೆ ನವೀನಮಾವುದೋ ॥೬॥

ತನುತಮಗೆಲ್ಲರುಂ ಮತಿಗೆ ತೋಱಿದುದಂ ಸಲೆ ಪೇೞ್ವರುತ್ತಮ
ಕ್ರಮುವೆನಲಕ್ಷರಂ ಧರೆಯೊಳೊಬ್ಬರ ಭಾಗೆಗೆ ಬಂದುದಲ್ತು ಲೋ ।
ಕಮನುಱೆ ಮೆಚ್ಚಿಸಲ್ ಗಿರಿಶನಾರ್ಪನೆ ತಮ್ಮಮುದಕ್ಕುಸಿರ್ವರಾ
ಕ್ರಮಿಸುತೆ ದುರ್ಜನಂಗೆ ಪರಿಶಂಕಿಸಲೇಕೆ ದುರುಕ್ತಿಭೀತಿಯಿಂ ॥೭॥

ಪರಿವಿಡಿದು ನಳಚರಿತ್ರಂ
ಪರಮುಪವಿತ್ರಂ ನಿತಾಂತಪುಣ್ಯಶ್ಲೋಕಂ ।
ವಿರಚಿಸುವನದಟನೀ ಚೌಂ
ಡರಸಂ ಕರ್ನಾಟವಂಶಶೃಂಗಾರರಸಂ ॥೮॥

ವ॥ ಅದೆಂತೆನೆ,

ಶ್ರೀಮುದಶೇಷವಸ್ತುಪರಿಪೂರ್ಣದಿನಾಗಮಯುಕ್ತಸದ್ಬುಧ
ಸ್ತೋಮದಿನೂರ್ಜಿತಪ್ರಕಟಸಂಪದಸನ್ನುತನಿತ್ಯಮಂಗಳ ।
ಕ್ಷೇಮದಿನುತ್ತಮೋತ್ತಮುಚತುರ್ವಿಧ ನಾಯಕನಾಯಿಕಾಮನಃ
ಪ್ರೇಮದಿನೊಪ್ಪುಗುಂ ನಿಷಧಮೆಂಬ ಮಹಾವಿಷಯಂ ಧರಿತ್ರಿಯೊಳ್ ॥೯॥

ತೊಲಗದ ಸಂಪದಂ ಸೊಬಗುಗುಂದದ ಯೌವನದೇೞ್ಗೆಯೆಲ್ಲರೊಳ್
ನೆಲಸಿದ ಧರ್ಮಮತ್ಯಧಿಕನೀತಿಕಲಾಕುಶಲತ್ವಮಾವಗಂ ।
ಸುಲಲಿತಸತ್ಯವಾಕ್ಯಮೆಡಱಿಲ್ಲದ ಭೋಗಮನಾರತಂ ಸಮು
ಜ್ಜ್ವಲಮೆನಿಸಿರ್ಪುದಾ ನಿಷಧದೇಶದ ಸನ್ನುತಸಜ್ಜನರ್ಕಳಾ ॥೧೦॥

ವ॥ ಮತ್ತಮಾ ಜನಪದಂ ಜನಾರ್ದನನಂತನಂತಭೋಗಸುಪ್ರತಿ ಷ್ಠಿತಮುಂ, ಯಾಗದೀಕ್ಷಿತನಂತನುಕ್ರಮುಕ್ಷೇತ್ರಪವಿತ್ರಮುಂ, ಸಂವತ್ಸರ ದಂತೆ ಪಾರ್ಥಿವನಂದನಶ್ರೀಮುಖಭಾವರಮ್ಯಮುಂ, ಸ್ವರ್ಗಲೋಕದಂತೆ ಸುಮನಸ್ಸಂದೋಹಮಂದಿರಮುಂ, ಕಶ್ಯಪಋಷ್ಯಾಶ್ರಮದಂತೆ ದೇವ ಮಾತೃಕಾಭಿರಾಮುಮುಂ, ಸಮಾಸಸಂಪತ್ತಿಯಂತೆ ಬಹುವ್ರೀಹಿ ಸಮೃದ್ಧಿಯುಂ, ಉತ್ತರದಿಶಾವಿಸ್ತಾರದಂತೆ ಮನುಷ್ಯಧರ್ಮಸನ್ಮಾರ್ಗ ಮುಂ, ನಂದನವನದಂತೆ ನಾನಾಜಾತಿಜನ್ಮಭೂಮಿಯುಂ, ಕ್ಷೀರಾಬ್ಧಿ ಯಂತೆ ಶ್ರೀವರಸಮಾಶ್ರಯ [ಮು] ಮಾಗಿರ್ಪುದಂತುಮಲ್ಲದೆಯುಂ,

ನಾನಾಧಾನ್ಯಸಮೃದ್ಧಿ ದೇವನಿವಹಂ ಪುಣ್ಯೋದನಂ ದಾನಸ
ನ್ಮಾನಂ ಭಾವಕಭಾವಿತಸ್ಥಿತಿ ಸದಾವರ್ಣಾಶ್ರಮಪ್ರಾಪ್ತಿ ವಿ ।
ಜ್ಞಾನಂ ಕುಂದದೆನಿಪ್ಪ ತದ್ವಿಷಯಮಂ ಸಾನಂದದಿಂ ನೋಡಿ ವಾ
ಣೀನಾಥಂ ಮಿಗೆ ಬಣ್ಣಿಸ[1]ಲ್ಕೆ[1]ಱಿವನೇಸಿರ್ದಂ ಚತುಃಪ್ರೌಢಿಯಂ ॥೧೧॥

ಸೀಮೋಲಂಘ್ಯಂ ನದಿಯೊಳ್
ಸಾಮಜದೊಳ್ ನಿಗಳಮೆನಿಪ ಕರಪೀಡೆ ರತಿ ।
ಪ್ರೇಮದೊಳತಿನಿರ್ಲಜ್ಜೆ ವಿ
ರಾಮಂ ಕಪಿಕುಲದೊಳಲ್ಲದಿಲ್ಲಾ ನಾಡೊಳ್ ॥೧೨॥

ಅಲ್ಲಿ ನಿರಂತರಂ ಮೆಱೆವುದೊಪ್ಪುವ ತನ್ನ ವಿಲಾಸದಿಂದೆ ವಾ
ಗ್ವಲ್ಲಭನೋಜೆಗೀ ಪುರವೆ ಸೀಮೆಯೆನುತ್ತಿಳೆ ಬಣ್ಣಿಸಲ್ಕೆ ತಾಂ ।
ಸಲ್ಲಲಿತಪ್ರಭಾಕರನಿಶಾಕರವೀಥಿಯ ಗೋಪುರಂಗಳ
ಲ್ಲಲ್ಲಿಯ ಚಿತ್ರದಿಂ ವಿಮಳಪಟ್ಟಣಮೆಂಬುದನೇಕಶೋಭೆಯಿಂ ॥೧೩॥

ಸುರುಚಿರಶಾತಕುಂಭಕಳಶಂಗಳಿನೊಪ್ಪುವ ಕೇರಿಕೇರಿಯು
ಪ್ಪರಿಗೆಯ ಲೋವೆಯೊಳ್ ಪೊಳೆವ ಮುತ್ತಿನ ಲಂಬಣದಿಂ ವಿಚಿತ್ರಕ ।
ರ್ಬುರಮಣಿತೋರಣಾವಳಿಗಳಿಂ ನವರತ್ನದ ಪುತ್ರಿಕಾಮನೋ
ಹರತೆಯಿನೊಪ್ಪುಗುಂ ವಿಮಳಪಟ್ಟಣಮುರ್ವಿಯ ಕಣ್ಗೆ ಕೌತುಕಂ ॥೧೪॥

ಪಸುರೆಳಗೌಂಗು ಪೆರ್ಚಿದೆಳನೀರ್ವೊಱೆಯೊಟ್ಟಿಲ ತೆಂಗು ಸಂತತಂ
ರಸ[2]ಮೊಸರ್ವೀಳೆ[2] ಪಣ್ಗೊನೆಗಳಿಂದೊಲೆದಾಡುವ ಬಾಳೆ ದೋರೆವ ।
ಣ್ಮುಸುಕಿದ ಬಕ್ಕೆಯುರ್ವಿಗಿಡುಗಂಧಿಕೆ ಕೊರ್ವಿದ ಕರ್ಬು ಕೆಂದಳಿರ್
ಮಿಸುಗುವ ಚೂತಮೊಪ್ಪಲತಿಕೌತುಕಮಾದುದು ತದ್ಬಹಿರ್ವನಂ ॥೧೫॥

ಕೋಗಿಲೆಯಿಂಚರಂ ಗಿಳಿಯ ಮೆಲ್ನುಡಿ ಭೃಂಗನಿನಾದಮಾವಗಂ
ಸೋಗೆಯ ತೆಂಗು ಮೆಲ್ಲನೆಡೆಯಾಡುವ ಮೆಲ್ಲೆಲರಂಚೆವಿಂಡು ತ ।
ಳ್ತೋಗರಗಂಪು ತಳ್ತಲತೆ ಕೊರ್ವಿದಶೋಕೆ ತಳಿರ್ತ ಮಾವು ಚೆ
ಲ್ವಾಗಿರೆ ತತ್ಪುರೋಪವನಮಂ ಮದನಂ ವನಮೆಂದು ಸಾಱಿನೇ ॥೧೬॥

ಆ ಪುರದಧಿಪತಿ ಸಕಳಕ
ಳಾಪರಿಣತನಧಿಕವೀರಸೇನಂ ಜಂಬೂ ।
ದ್ವೀಪಮನೊರ್ವನೆ ಪೆರ್ಚಿದ
ಕೂಪಾರಂ ಸೀಮೆಯಾಗಲಾಳುತ್ತಿರ್ದಂ ॥೧೭॥

---

[1] ಲ್ಕೆ. [2] ಪೊಸವೀಳೆ.

ಅಸಿತತನು ಕಾಲದಂಡಂ
ಮಿಸುಗುವ ಮಹಿಷಾಧಿಪತಿಯ ವಾಹನವತಿಸಾ ।
ಹಸವೊಪ್ಪುವಂತಕಂ ತ
ನ್ನಸದೃಶಮೂರ್ತಿಯನಲಂಪಿನಿಂ ತೋಱಿಸಿದಂ ॥೨೫೯॥

ಪುರುಮಿನವಾಹನಂ ನಿ
ಷ್ಠುರಪಾಶಂ ವಿಮಳದೇಹವೊಪ್ಪುವ ವರುಣಂ ।
ಸುರುಚಿರ ಮೂರ್ತಿಯೊಳಿರ್ದಂ
ಧರಣೀಶಂ ಬೆಱಗುವಮುತ್ತು ನೋೞ್ಪನ್ನೆವರಂ ॥೨೬೦॥

ವ॥ ಅಂತಿರ್ದರಂ ನಳಂ ಕಂಡು,

ಅಮರೇಂದ್ರಾಗ್ನಿಯಮಾಂಬುಪ
ನಿಮಗೇನಂ ಮಾಡ್ಪೆನೆಂದು ನರಪತಿ ಕೇಳಲ್ ।
ಕ್ರಮದಿಂ ನೀನೆಮಗೊಂದು
ತ್ತಮಕಾರ್ಯವನೆಸಗು ಕೇಳದಂ ಭೂಪಾಲ ॥೨೬೧॥

ನಿನ್ನ ಪರೋಪಕಾರಗುಣವಂ ನಯಮಾರ್ಗವನತ್ಯುದಾರಸಂ
ಪನ್ನತೆಯಂ ಮದೀಯಸುರಲೋಕದೊಳದ್ಭುತವಾಗಿ ಕೇಳ್ದು ಸ।
ತ್ಸನ್ನಿಧಿಗಿಂದು ಬಂದೆವೆಮಗುತ್ತಮವಾದ ಪದಾರ್ಥವೊಂದನೀ
ವುನ್ನತಕಾರ್ಯಮಂ ನೆನೆವುದೆಂದಮರರ್ ನುಡಿದರ್ ನೃಪಾಲನೊಳ್
॥೨೬೨॥

ವ॥ ಅದಾವುದೆನೆ,

ವನಿತಾಲೋಕದೊಳತ್ಯಪೂರ್ವಮೆನಿಸಲ್ ಸಾರ್ದಿರ್ದ ವೈದರ್ಭನಂ
ದನೆಯೆಂಬಳ್ ದಮಯಂತಿಯಾಕೆಯನಲಂಪಿಂದಿತ್ತು ಮತ್ಪ್ರೇಮವ ।
ರ್ಧನಮಂ ಮಾಳ್ಪುದು ನೀನೆನುತ್ತ ದಿವಿಜರ್ ಪೇೞಲ್ಕೆ ನಕ್ಕಂ ನೃಪಾ
ಲನದೆನ್ನಿಚ್ಛೆಯೆ ಲೋಕರತ್ನವನದಂ ತಾನೀಯಲೇಂ ಬಕ್ಕುಮೇ ॥೨೬೩॥

ವ॥ ಅದಕ್ಕಮರ್ತ್ಯರ್ ತಮ್ಮೊಳ್,

ಶಾತೋದರಿ ಬಯಸುವ ನಳ
ನೀತಂ ತಾಂ ದೂತನಾಗಿ ಪೋದೊಡೆ ತತ್ಕಾಂ ।
ತಾತತಿಯಿವನೆಲ್ಲಿಯುನೆಂ
ದೇತೆಱದಿಂ ನೀಚನಾಗಿಪರ್ ನಸುನಗುತಂ ॥೨೬೪॥

ಆದೊಡೆಮಗೊಂದು ಕಾರ್ಯಮ
ಹೋದಯಮಂ ಮಾಳ್ಪುದಾಕೆಯೆಮ್ಮಂ ವರಿಪಂ ।
ತಾದರದಿಂ ನೀಂ ಪೋಗಿ ಮ
ನೋದುರ್ಘಟಕಾರ್ಯವೆನ್ನದೆಲೆ ಭೂಪಾಲಾ ॥೨೬೫॥

ಅದನೇಗೆಯ್ದಪನಿಪನಾಂ
ಸುದತಿಯನೀಕ್ಷಿಸುವುಪಾಯವೆಂತೆನಲವಳ ।
ಲ್ಲದೆ ಮಿಕ್ಕ ಪುರುಷತತಿ ಕಾ
ಣದ ವಿದ್ಯೆಯನಿತ್ತೆವೆಂದು ಕಳುಪಿದರಾಗಳ್ ॥೨೬೬॥

ಆ ನೃಪನಱಿಯದ ತೆಱದಿಂ
ಮಾನಿನಿಯೊರ್ವಳನತೀವಸೂಕ್ಷ್ಮಾಕೃತಿಯಿಂ ।
ನೀನೊಡನಿರೆಂದು ಕಳುಪಿದ
ನೇನಂ ಪೇೞ್ದಪ್ಪನೆಂದು ದಿವಿಜಾಧೀಶಂ ॥೨೬೭॥

ಭಾವಿಸಿ ತನ್ನ ದೇಹಸುಖವೇತಱದೆಂದು ಪರೋಪಕಾರವಂ
ಕೋವಿದವೃತ್ತಿಯಿಂದೆಸಗದಿರ್ಪನ ಜೀವನವೇನು ಬಂದವರ್ ।
ಕೇವಳಮಲ್ತು ನಾಲ್ವರವರೆಂದುದ ಗೆಯ್ದಪೆನೆಂದು ಭೂಭುಜಂ
ಭಾವಕಿ ಭೀಮನಂದನೆಯ ತಾಣಮನೊರ್ವನೆ ಕೂರ್ಮೆಗೆಯ್ದಿದಂ ॥

ನಯನಪ್ರೀತಿಯನಪ್ಪುಗೆಯ್ವ ತನುವಂ ಪ್ರಾಣಾನಿಳಂ ಪೊಕ್ಕು ಚೇ
ಷ್ಟೆಯನೀಗಂತವನೀಶ್ವರಂ ಪುರುಷರಾರುಂ ಕಾಣದಂತಂಗನಾ ।
ಚಯವಿರ್ದಲ್ಲಿಗೆ ಭೋಂಕನೆಯ್ದಿ ವಿಲಸತ್ತೇಜೋಮಯಂ ಪದ್ಮಿನೀ
ಪ್ರಿಯನೆಂಬೊಂದು ವಿಳಾಸದಿಂ ನೆಲಸಿದಂ ಶೃಂಗಾರರಂಗಸ್ಥಳಂ ॥೨೬೯॥

ದಮಯಂತೀವಿರಹಪ್ರಶಾಂತಿಗೆ ಮೃಣಾಳಂ ತಾಳವೃಂತಂ ಕನ
ತ್ಕಮಳಂ ಕೋಮಳಪಲ್ಲವಾಸ್ತರಣವಂಭಃಕುಂಭವಾಮೋದನಿ ।
ರ್ಗಮಮಾಲಾವಳಿ ತೀವಿ ಕಣ್ಗೆ ಸೊಗಸಿರ್ಪಂತಃಪುರಂ ಚಿತ್ತಜಾ
ತಮನಃಕೌತುಕಮಾಗಿರಲ್ ನಳನೃಪಂ ಕಂಡಂ ಕಥಾಶ್ಚರ್ಯಮಂ ॥

ರವಿಬಿಂಬದ್ಯುತಿ ಮೂರ್ತಿವೆತ್ತ ತೆಱದಿಂ ತೇಜೋಮಯಂ ಪೂರ್ಣವೈ
ಭವನುತ್ಕೀರ್ಣಪರೋಪಕಾರನಿರತಂ ಕಾರುಣ್ಯವಾರಾಶಿ ಭೂ ।
ಭುವನೈಕಪ್ರಭು ಮಂಗಲಾಂಗಜನಿಭಂ ಸೌಭಾಗ್ಯಸಂಕ್ರಂದನಂ
ಯುವರಾಜಂ ದಮಯಂತಿಕಾಂತೆಯಿದಿರೊಳ್ ನಿಂದಿರ್ದನಂದಾಕ್ಷಣಂ ॥

ವಿರಹವಿಷಾದವಗ್ಗಲಿಸೆ ಕಂದಿದ ಮೆಯ್ ಕುಸುಮಾಸ್ತ್ರತಾಪದಿಂ
ಕೊರಗಿದ ವಕ್ತ್ರಪದ್ಮವಧಿನಾಥನ ಕಾಂಕ್ಷೆಯಿನಾದ ಚಿಂತೆಯಾ ।
ವರಿಸಿದ ಚಿತ್ತವೊಪ್ಪವರುಣಾಧರೆ ನೀರಜನೇತ್ರೆ ಸತ್ಪಯೋ
ಧರೆ ದಮಯಂತಿ ರೂಪವತಿ ಭೋಂಕನೆ ಕಂಡಳಿಳಾಧಿನಾಥನಂ ॥೨೭೨॥

ನೃಪನಂ ಭೋಂಕನೆ ಕಂಡು ಕಾಂತೆ ಕುಚದೊಳ್ ಸವ್ಯಾನಮಂ ಸೈತು ಸಾ
ರ್ಚಿ ಪದಂ ಕಂಪಿಸಲೆರ್ದು ನಿಂದು ವಿನಮಲ್ಲಜ್ಜಾಂಗಿ ವಾರಾಂಗನಾ ।
ಲಪನಾಲೋಕನದಿಂ ಸುಖಾಸನಮನೀಯಲ್ ಪೇಳ್ದು ಮೇಲ್ನೋಟದಿಂ
ದುಪಚಾರಂಗಳನೆಲ್ಲವಂ ಮಱೆದು ಚಿತ್ರಾಕಾರಮಂ ತಾಳ್ದಿದಳ್ ॥೨೭೩॥

ಎತ್ತಣ ಭೀತಿಯೆಂಬಯೆಡೆಗೊಳ್ಳದೆ ಕಾವರಿಸುತ್ತಮಿರ್ಪ ಮ
ಚ್ಚಿತ್ತದೊಳೀತನಾತ್ಮಪತಿಯೆಂಬವೊಲಿರ್ದಪುದಾದೊಡಂ ನೃಪಾ ।
ಲೋತ್ತಮನಿಲ್ಲಿಗೇತೆಱದಿನೆಯ್ತರಲಾದುದು ನಿಮ್ಮ ನಾಮವೇಂ
ಮತ್ತಿನ ಕಾರ್ಯಮಂ ಬೆಸಸಿಮೆಂದುಱೆ ಪೇಳ್ ತರಳಾಯತೇಕ್ಷಣೇ
॥೨೭೪॥

ನಳನಲ್ಲದಿತರಪುರುಷರ
ನೊಳಕೊಳ್ಳದು ನೋಡಿ ಮನ್ಮನಂ ಪುಸಿಯೆಂದುಂ ।
ಸುಟಿಯದು ನೃಪತಿಯ ಬಗೆಯೊಳ್
ತಿಳಿ ನೆಲೆಯಂ ಮತ್ತೆ ಸಂಶಯಕ್ಕೆಡೆಯುಂಟೇ ॥೨೭೫॥

ವ॥ ಎನಲೊರ್ವಳ್ ಕಯ್ಗಳಂ ಮುಗಿದು,

. . . . . .
ದನುನಯದಿಂ ನಿನ್ನ ನಾಮವೇಂ ಕಾರ್ಯಂ ಬಂ ।
ದನ ಕಾರಣವೇನೆಂಬುದ
ನಿನಿತಂ ಪೇಳ್ ಸುಭಗ ಕರ್ಣಕೌತುಕವಾಗಲ್ ॥೨೭೬॥

ನೀನೆಂಬೀ ನಾಮವೇ ನಾಮದ ನೆಲೆ ಪುರುಷರ್ ಕಾಣದಂತಿರ್ಪ ವಿದ್ಯಾ
ದಾನಂ ದೇವೇಂದ್ರನಿಂದಾಯ್ತನಗಮರವರಂ ವಹ್ನಿ ಕಾಲಾಂಬುಪರ್ ಚಿ।
ತ್ತಾನಂದಂಬೆತ್ತು ತಮ್ಮಂ ವರಿಸುವ ಬಗೆಯಿಂ ಕಾಂತೆಯಿರ್ದಲ್ಲಿಗೆನ್ನಂ
ದೀನಾಸ್ಯರ್ ಕೂರ್ಮೆಯಿಂದಟ್ಟಿದರಿದು ಸಹಜಂ ಪದ್ಮಪತ್ರಾಯತಾಕ್ಷೀ ॥

ಆ ಮಾತಂ ದಮಯಂತಿ ಕೇಳ್ದು ಕರದಿಂ ಕರ್ಣಂಗಳಂ ಮುಚ್ಚಿಕೊಂ
ಡೀ ಮಾತಾಡುವರೇ ಬುಧರ್ ನಳನೃಪಂ ಪ್ರಾಣೇಶ್ವರಂ ಮಿಕ್ಕವರ್ ।
ಕಾಮಾರ್ಥರ್ ಬಯಲಾಸೆಯಂ ತಳೆಯಲೇಕಿನ್ನಾದೊಡಂ ಪೇಳ್ ಮನಃ
ಪ್ರೇಮಂ ಕೆಯ್ಮಿಗೆ ನಿನ್ನ ನಾಮವನೆನುತ್ತಾ ಕಾಂತೆ ಹಿಮ್ಮೆಟ್ಟಿದಳ್ ॥೨೭೮॥

ಆದೊಡೆ ನಳನಾಂ ತಪ್ಪದು
ಸಾದರದಿಂ ಕೇಳ್ ಸರೋಜಮುಖಿ ದಿವಿಜರ್ ಚೆ ।
ಲ್ವಾದ ದಮಯಂತಿ ತಮಗಿಂ
ದಾದಪಳೆನೆ ಮಾಟ್ಪುದೆಂದು ಕಳುಪಲ್ ಬಂದೆಂ ॥೨೭೯॥

ಎನಲೊಡಮಂಗಕಾಂತಿ ತನಿವೆರ್ಚೆ ಮುಖಾಬ್ಜವರಲ್ದು ಸಮ್ಮದಂ
ನನೆಕೊನೆವೋಗಿ ರೋಮಪುಳಕಾವಳಿಯುರ್ಬೆ ಬೆಮರ್ತುರ್ಕೆ ಕರ್ಕಶ ।
ಸ್ತನಕಳಶಕ್ಕೆ ಸಾರ್ಚಿದ ಸೆಱಂಗು ಸಡಿಲ್ದು ಮನೋನುರಾಗದಿಂ
ವನಿತೆಯ ಮೂರ್ತಿ ನೂತ್ನವೆನಿಸಿತ್ತು ಮನೋಭವನಂಜಿ ಬೆಂಬುಗಲ್
॥೨೮೦॥

ವ॥ ಅನಂತರಂ,

ಆನೊಲ್ದು ಬಂದ ಕಾರ್ಯಮ
ನೇನೆಂದಪೆ ಕಾಂತೆಯೆಂದು ನರಪತಿಕೇಳ ।
ಲ್ಕಾನಮ್ರನುತ್ತರಂಗುಡು
ಭೂನಾಥಂಗೆಂದದೊರ್ವಳಂ ನಿಯಮಿಸಿದಳ್ ॥೨೮೧॥

ಕೆಳದಿಯದೊರ್ವಳ್ ನಿಜಕರ
ತಳಮಂ ಮುಗಿದವನಿಪಾಲ ಕಾರ್ಯದ ತೆಱನಂ ।
ತಿಳಿವಂತು ಪೇೞೆನಲ್ ಕೋ
ಮಳೆ ಕೇಳೆಂದಾಕೆಗಾತನಂದಿಂತೆಂದಂ ॥೨೮೨॥

ಸುರತತಿ ಸೇನೆ ರಂಭೆ ನಿಜವಾರವಿಳಾಸಿನಿ ವಜ್ರವಾಯುಧಂ
ಸುರಕರಿ ವಾಹನಂ ಶಚಿ ಮನೋರಮೆ ಮೂರ್ತಿ ಸಹಸ್ರಲೋಚನಂ ।
ಸುರಪತಿಗಾತನಂ ವರಿಸಿ ನಿರ್ಜರಭೋಗವನೊಲ್ಲದನ್ಯರಂ
ವರಿಸಲದೇಕೆ ಮಾನವತಿಯಂತರವಾವುದಮರ್ತ್ಯಮರ್ತ್ಯರೊಳ್ ॥೨೮೩॥

ಮುನಿದೊಡೆ ಭುವನತ್ರಯಮಂ
ತೆನೆಯಂ ಪೊಸೆವಂತು ಪೊಸೆವ ಸತ್ತ್ವಸಮಗ್ರಂ ।
ದಿನಕರಪುತ್ರಂ ಮಹಿಷಾ
ಸನನಾತನನೇಕೆ ವರಿಸಳಬ್ಜದಳಾಕ್ಷೀ ॥೨೮೪॥

ಸತತಂ ರುಚಿಯೆನಿಪ ಮಹಾ
ದ್ಭುತಸತ್ತ್ವನನುಗ್ರಮೇಷವಾಹನನಂ ಸ ।

ನ್ನುತಿವೆತ್ತ ಸಪ್ತಜಿಹ್ವನ
ನತಿಬಳನಂ ವರಿಸಳೇಕೆ ಧೂಮಧ್ವಜನಂ ॥೨೮೫॥

ಚಲಿಸದೆ ರತ್ನಾಕರದೊಳ್
ನೆಲಸಿದನಂ ಪಾಶಪಾಣಿಯಂ ಪಶ್ಚಿಮದಿ ।
ಗ್ನಿಲಯನನನಿಮಿಷವಾಹನ
ನೊಲವಿಂದಂ ವರಿಸಳೇಕೆ ಕಮಳದಳಾಕ್ಷೀ ॥೨೮೬॥

ವ॥ ಎಂಬುದುಂ,

ನಗೆಯೊಡಲಾತನಂ ಹರಣಗೊಂಬವನಂ ಬಡವಾಗಿ ಪುಟ್ಟುತಂ
ಹೊಗೆಮುಸುಡಾತನಂ ಜಡನನೊಳ್ಪಿದನೆಂಬರೆ ಭೂಪ ಕೂರ್ಮೆಯಿಂ ।
ಮೃಗಶಿಶುನೇತ್ರೆಗೇಂ ದೊರೆಯುವರ್ ವರಿಸಲ್ ನಳನಲ್ಲದನ್ಯರಂ
ಬಗೆವಳೆ ಚಿತ್ತದೊಳ್ ದಿವಿಜಸಂತತಿಯಂ ದಮಯಂತಿ ಸಂತತಂ ॥೨೮೭॥

ವ॥ ಮತ್ತಂ ದಮಯಂತಿ,

ಅತಿಶಯವಾಕ್ಯಮೇವುದವರೇ [ಂಪಿರಿ] ಯರ್ ಕಡುಕೆಯ್ವ ನಿನ್ನ ಸಂ
ಸ್ತುತಿಗೆ ಕುಲೀನರಲ್ತುಣಲುಡಲ್ ಪಡೆಯರ್ ಸತತಂ ಸುರಾಲಯ ।
ಸ್ಥಿತರೆನಗೆಂತು ಭಾವಿಪೊಡೆ ವಲ್ಲಭರಾದಪರುರ್ವರೇಶ ನೀಂ
ಪತಿ ಸತಿಯಾನೆನುತ್ತಬಲೆ ಕಯ್ಮುಗಿದೊಯ್ಯನೆ ಮೆಯ್ಯನಿಕ್ಕಿದಳ್ ॥೨೮೮॥

ವ॥ ಎಂದು ಮತ್ತಂ,

ಪ್ರಕಟಂ ಸ್ವಯಂವರಂ ಲೌ
ಕಿಕನನ್ವಯಸಕ್ರಮಂ ಪಿತಾಜ್ಞೆ ಸಖಿಪ್ರೀ ।
ತಿಕರಂ ತಾನಾದುದಱಿಂ
ಸಕಲೋತ್ಸವಮಂಟಪಕ್ಕೆ ಬರ್ಪುದಿಳೇಶಾ ॥೨೮೯॥

ಎಂದು ದಮಯಂತಿ ನೃಪಗಾ
ನಂದದಿ ಕಯ್ಮುಗಿದು ಕಳುಪಲಾತಂ ಮುನ್ನಂ।
ಬಂದಂದದಿಂದ ಪೋಗಿ ಪು
ರಂದರನೊಳ್ ಕಾಂತೆ ನುಡಿದ ತೆಱನಂ ಪೇಳ್ದಂ ॥೨೯೦॥

ಅದುಮಲ್ಲದಮರನಾಥಂ
ತ್ರಿದಶಾಂಗನೆಯೊರ್ವಳಂ ನೃಪಾಲನ ಬೆನ್ನೊಳ್ ।

ಮುದದಿಂದಟ್ಟಿದನವಳಱ
ಯದ ತೆಱದಿಂ ಬಂದು ಪೇೞ್ದಳಾಕೆಯ ಬಗೆಯಂ ||೨೯೧||

ನಳನಲ್ಲದನ್ಯರಂ ಕೋ
ಮಳೆ ವರಿಸಳ್ ತನ್ನೃಪಂ ನಿಜಸ್ಥಿತಿಗತಿಯಂ ।
ತಿಳಿವಂತಿರೆ ಪೇೞ್ದುದುವೇಂ
ನಳಿನಾಕ್ಷಿಗೆ ಭಿನ್ನಭಾಂಡಜಲವಾಯ್ತಾಗಳ್ ||೨೯೨||

ವ|| ಅದಕ್ಕವರ್ ಮೆಚ್ಚಿ,

ಮಾನನಿಧಿ ನಳನೃಪಂಗ
ತ್ಯಾನಂದದಿನಮರಪತಿಯಪೂರ್ವಮೆನಲ್ ತೇ ।
ಜೋನಿಳಯನಶ್ವಹೃದಯ
ಜ್ಞಾನವನಿತ್ತಂ ಗುಣಂಗಳಂ ಪೊಗೞುತ್ತಂ ||೨೯೩||

ನೆನೆದಾಗಳಗ್ನಿಸಿದ್ಧಿಯ
ನನುನಯದಿಂದಿತ್ತನೆಂದು ನಳಭೂಪಾಲಂ ।
ಗನಲಂ ವರವಂ ಕೊಟ್ಟಂ
ಘನತೇಜೋಮೂರ್ತಿ ನಿಖಿಳಲೋಕೋತ್ಕೃಷ್ಟಂ ||೨೯೪||

ಸಮರವಿಜಯಂ ನಿತಾಂತಂ
ಸಮಸಂದಿರ್ಕೆಂದು ನಳನೃಪಾಲಂಗೊಲವಿಂ ।
ಸಮವರ್ತಿ ವರವನಿತ್ತಂ
ಸಮಸ್ತಲೋ[1]ಕಾಂತಕರ್ತೃ[1] ಭೀಕರಗಾತ್ರಂ ||೨೯೫||

ಸುಲಲಿತನಿರ್ಮಳಕೋಮಳ
ಜಲಸಿದ್ಧಿಯನಿತ್ತನೆಂದು ವರುಣಂ ವರವಂ ।
ನಳಭೂಪತಿಯೊಳ್ ಸತತಂ
ಸಲಿಸಿದನೊಲವಿಂ ಪ್ರಮೋದವೆಸೆಯಲ್ ನಲವಿಂ ||೨೯೬||

ವ|| ಅನಂತರಂ,

ಸ್ಥಿರಗುಣಶೀಲನಂ ನಳನೃಪಾಲನನಲ್ಲದೆ ಕಾಂತೆ ಕೂರ್ಮೆಯಿಂ
ವರಿಸಳದಕ್ಕುಪಾಯವಿದೆನಲ್ ನಳನಾಕೃತಿಯಂ ನಿರಂತರಂ ।
ಧರಿಸುವೆವೆಮ್ಮ ಭೇದವಿನಿತಿಲ್ಲದೆ ತನ್ನೃಪನಾತ್ಮಮೂರ್ತಿಯಂ
ಸುರಪತಿವಹ್ನಿಕಾಲವರುಣರ್ ತಳೆದರ್ ಪೆಱಪಿಂಗೆ ಸಂತತಂ ||೨೯೭||

[1] ಕಯ್ಯಾತಕರ್ತ.

ಅಂತು ನಳನಯ್ವರಾಗಿ ಸ
ಮಂತೆಸೆವ ವಿದರ್ಭನೃಪನ ಪುರದುದ್ಯಾನ ।
ಪ್ರಾಂತದೊಳಿರ್ದರ್ ಸತತಂ
ಚಿಂತಿಸುತಂ ಸನ್ಮುಹೂರ್ತವಂ ಸಾಧಿಸುತಂ ॥೧೯೮॥

ವ॥ ಅನ್ನೆಗಂ,

ನಾನಾವಾಹನಕೋಟಿಸೇವಕಮಹಾಲಂಕಾರದಿವ್ಯಾಂಬರಾ
ನೂನದ್ರವ್ಯಸಮೇತಮುತ್ತಮಕುಲೋದ್ಭೂತರ್ ಕಳಾಕೋವಿದರ್ ।
ಸಾನಂದ೦ ಮಿಗೆ ಕಾಮರಾಜ್ಯವಿಭವಂ ಕಯ್ಸಾರ್ಗುಮೆಂದಂಗನಾ
ಧ್ಯಾನಾಧೀನಪರರ್ ಸ್ವಯಂವರಮಹೋತ್ಸಾಹಕ್ಕೆ ಬಂದರ್ ನೃಪರ್ ॥೧೯೯॥

ವಾರವಿಳಾಸಿನೀನಿಕರಮಿಕ್ಕುವ ಚಾಮರದಿಂ ಸುರತ್ನಕೋ
ಟೀರಮರೀಚಿಯಿಂ ರುಚಿರಕುಂಡಳಮಂಡಿತಗಂಡದೀಪ್ತಿಯಿಂ ।
ಹಾರಮಯೂಖದಿಂ ಪದಕಕಾಂತಿಯಿನಿರ್ಮಡಿ ಚೆಲ್ವುವೆತ್ತ ಧಾ
ತ್ರೀರಮಣರ್ ಸ್ವಯಂವರಕೆ ಬಂದರತೀವಮನೋನುರಾಗದಿಂ ॥೨೦೦॥

ಮತ್ತಮನಂತಮಹೀಶರ್
ಚಿತ್ತಜಸನ್ನಿಭರನೇಕವೈಭವದಿಂದಾ ।
ಯತ್ತಚತುರಂಗಬಲಯುತ
ರುತ್ತಮಕುಲಜರ್ ಸ್ವಯಂವರಕ್ಕೆಯ್ತಂದರ್ ॥೨೦೧॥

ಸುಕವಿತತಿ ವೃದ್ಧವೈದ್ಯ
ಪ್ರಕರಂ ಸಾಮುದ್ರಿಕಪ್ರತಾನಂ ಮೌಹೂ ।
ರ್ತಿಕಸಂಘಂ ಪೌರೋಹಿತ
ನಿಕರಂ ತಮ್ಮೊಡವರಲ್ ನೃಪಾಲರ್ ಬಂದರ್ ॥೨೦೨॥

ವ॥ ಅಂತು ಬರೆ,

ಮಂಗಳವಾದ್ಯದಿಂ ಕಳಸಕ[ನ್ನ]ಡಿಯಿಂ ದ್ವಿಜಮಂತ್ರಘೋಷದಿಂ
ದಂಗನೆಯರ್ಕಳಿಕ್ಕುವ ಸಿತಾಕ್ಷತಸೇಸೆಗಳಿಂದಿದಿರ್ಗೊಳು ।
ತ್ತುಂಗಜರೂಪಸನ್ನಿಭರನುರ್ವಿಪರಂ ಸ್ವಪುರಪ್ರವೇಶಮಂ
ಕಂಗೊಳಿಪಂತು ಮಾಡಿಸಿದನುತ್ಸವದಿಂದೆ ವಿದರ್ಭಭೂಭುಜಂ ॥೨೦೩॥

ತರತರದಿಂ ಸಮಸ್ತಧರಣೀಶ್ವರರಂ ನವರತ್ನಹೇಮವಿ
ಷ್ಟರದೊಳನೂನವೈಭವಮುದಂ ಮಿಗಲೊಪ್ಪಿರಲರ್ಘ್ಯಪಾದ್ಯಮಂ ।

ನರಪತಿ ಭೀಮನಿತ್ತು ಕುಶಲೋಕ್ತಿಗಳಿಂ ವಿವಿಧೋಪಚಾರದಿಂ
ಪರಿವಿಡಿಯಿಂದ ಮನ್ನಿಸಿದನೇಂ ಕ್ರಮಯುಕ್ತನೊ ತನ್ನೃಪಾಲಕಂ ॥೩೦೪॥

ಮುನ್ನವೆ ಶೋಭಾಯುತಸಂ
ಪನ್ನವೆನಲ್ ಮಾಡಿಸಿಟ್ಟ ಮಂದಿರದೊಳ್ ಸೌ ।
ಖ್ಯೋನ್ನತಿಯಿಂದ ಪಥಶ್ರಮ
ವಂ ನೆಟ್ಟನೆ ಕಳೆಯಿಮೆಂದು ಕಳುಪಿದನವರಂ ॥೩೦೫॥

ವ॥ ಅನಂತರಂ,

ನಾಳೆ ಮುಹೂರ್ತವಾದುದರುಣೋದಯಕಾಲದೊಳೊಲ್ದನೇಕಭೂ
ಪಾಲಕಸಂಕುಳಂ ನೆಗಟ್ದ ಕಾಲವಿಳಂಬನವಾಗದಂತು ಸಂ ।
ಕ್ಷಾಳಿತದೇಹರಾಗಿ ನಡೆತಪ್ಪುದು ಮಂಗಳಮಂಟಪಕ್ಕೆನು
ತ್ತೋಳಿಯ ಕೇರಿಕೇರಿಗಳ ಡಂಗುರವುರ್ವಿದುದಾ ಪುರಾಂತದೊಳ್
॥೩೦೬॥

ಪಾಸಿದ ಪೂಗಳಂತಗಲಿ ತಾರಗೆಗತ್ತಲೆಯಂತೆ ನಿದ್ರೆಮು
ನ್ನೋಸರಿಸಲ್ ನೆಗಟ್ದುದಯರಾಗಮುಗುರ್ವಿಸೆ ಕಾಂತಿ ಕೈಮಿಗಲ್ ।
ವಾಸರಕಾಂತಿಯಂ ಪರಿಸಲಂಬರದೊಪ್ಪದಿನಾಂತು ಪೂರ್ವಶೈ
ಲಾಸನದೊಳ್ ಬಡಂಗುವಡೆದಂ ದಿನನಾಯಕನಿಂದ್ರದಾಯಕಂ ॥೩೦೭॥

ವ॥ ಆ ಸಮಯದೊಳ್,

ಕಳಕಳಮುಣ್ಮೆ ಭೂಷಣಚಯಂ ಮಿಗೆ ಪಲ್ಲಟವಾಗೆ ಹಜ್ಜೆ ಸಂ
ಚಳಿಸೆ ಕರಂಡವಾಹಕರ [1]ಕಯ್ವೊ[1]ಲದಿಂ ಕೆಲರಂದಣಂಗಳಿಂ ।
ಕೆಲರತಿವೇಗದಿಂದ ಪರಿಯಿಟ್ಟು ಕೆಲರ್ ನಡೆತಂದು ಮಂಟಪ
ಸ್ಥಳದ ವಿಶಿಷ್ಟವಿಷ್ಟರದೊಳಿರ್ದುದು ರಾಜಿತರಾಜಸಂಕುಳಂ ॥೩೦೮॥

ಸಕುಟಿಲರಕ್ಷೆ ವಶ್ಯತಿಲಕಂ ಸಕಲೌಷಧಿ ಕಾಮಯಂತ್ರಮು
ದ್ರಿಕೆ ಮದನಾಗ್ನಿ ಮಂತ್ರಿತತಿ ರೋಚನಕುಂಕುಮಗಂಧಸಾರ ಪ ।
ದ್ಮಕಕನುಲೇಪನಂ ಮಕರಕೇತನಮಂಗಳನಾಮಜಾಪ್ಯವಾ
ಸ್ತಿಕರೆನಿಸಲ್ ಮನಂಗೊಳಿಸಲಿರ್ದುದು ಬಿಂಕದ ರಾಜಸಂಕುಳಂ ॥೩೦೯॥

ತೊಡವನಳಂಕೆಗೆಯ್ವ ಜನವಶ್ಯವಿಭೂತಿಯನಿಟ್ಟುಕೊಳ್ವ ಕ
ನ್ನಡಿಗಳನೊಪ್ಪಿ ನೋಟ್ಪ ನಿಡುದೋಳ್ಗಳನಂಟಿ[ಪ ಬಿಟ್ಟ]ಬಾಯ್ಗಳಂ ।
ಮಿಡುಕಿಪ ಕಾಂತೆಬಪ್ಪ ದೆಸೆಯಂ ನಿಸದಂ ನಡೆನೋಡಿ ನೋಡಿ ಕಂ
ಗೆಡುವ ಬಟಲ್ಕೆಯುಜ್ಜುಗದೊಳಿರ್ದುದು ಚಾಪಳಭೂಪಸಂಕುಳಂ ॥೩೧೦॥

[1] ಕೈಲಾ.

ಪಂಚನಳರೆಲ್ಲರಿಂದಂ
ಮುಂಚುವೆವೆಂದು ಸ್ವಯಂವರಾಲಯದ ಲಸ ।
ತ್ಕಾಂಚನಸಿಂಹಾಸನದೊಳ್
ಸಂಚಲಿಸದೆ ನೆಲಸಿದರ್ ವಿಚಿತ್ರಾಕೃತಿಯಿಂ ॥೩೧೧॥

ಕರೆ ದಮಯಂತಿಯಂ ಸಕಲಭೂಪತಿಗಳ್ ನೆರೆದಿರ್ದಪರ್ ಸ್ವಯಂ
ವರಸದನಕ್ಕೆನುತ್ತಖಿಳವಾರವಧೂಜನವಂ ಪುರೋಹಿತೋ ।
ತ್ಕರವನನೇಕಸದ್ಗುಣಕರಂ ಬರೆಯೊಪ್ಪುವ ಸೌವಿದಲ್ಲರಂ
ನರಪತಿಯಟ್ಟಿದಂ ವಿವಿಧಮಂಗಳವಾದ್ಯಸಮೇತವಾಕ್ಷಣಂ ॥೩೧೨॥

ವ॥ ಅಂತು ಕರೆಸೆ,

ನವಮಣಿನೂಪುರಂ ರುಚಿರಮೇಖಳೆ ಮುದ್ರಿಕೆ ಹಸ್ತಕಂಕಣಂ
ನವಮಿಗುವಂಗದಂ ವಿಮಳಮೌಕ್ತಿಕಕಂಠಿಕೆ ಕರ್ಣಭೂಷಣಂ ।
ಯುವತಿಯಿನೊಪ್ಪುಗೆಂದು ಸಕಳಾವಯವಾಭರಣಂಗಳಂ ಸಖೀ
ನಿವಹವಳಂಕೆಗೆಯ್ಸೆ ಸೊಬಗಿಮ್ಮಡಿಸಿತ್ತು ಸರೋಜನೇತ್ರೆಯಾ ॥೩೧೩॥

ಸಾರಸುವರ್ಣಕಾಂತಿ ದಮಯಂತಿಯ ಪೂರ್ಣಶರೀರವರ್ಣವಿ
ಸ್ತಾರವನಾವಗಂ ಪಡಯಲೆಂದುಱೆ ಕಾಲ್ವಿಡಿದಿರ್ದ ಮಾಣ್ಕೆಯಿಂ ।
ನಾರಿಯ ಕೋಮಳಾಂಘ್ರಿಗಳೊಳುಜ್ಜ್ವಲತೇಜವನಪ್ಪುಗೆಯ್ದು ಮಂ
ಜೀರಕವೇಂ ಮನಂಗೊಳಿಸುತಿರ್ದುವೊ ರತ್ನನಿಕಾಯದೀಪ್ತಿಯಿಂ ॥೩೧೪॥

ಲೀಲೆಯಿನಲರ್ಗಣೆಗಳ ಸಂ
ಕೀಲಿಸಿದಂ ಮದನನೆಂಬ ತೆಱದಿಂದಾಗಳ್ ।
ಬಾಲೆಯ ಪದದೊಳ್ ಮೆಱೆದವು
ಕಾಲುಂಗುರವೀರಮುದ್ರಿಕಿಱುಮಂಟಿಕೆಗಳ್ ॥೩೧೫॥

ಮಳಯಜಶಾಖೆಯಂದದ ಪುರಂಧ್ರಿಯ ಕೋಮಳಮಧ್ಯದಲ್ಲಿ ಮಂ
ಡಳಿಸಿದ ಭೋಗಿಯೋ ನವಘನಾಗಮಲಕ್ಷ್ಮಿಯನೊಪ್ಪಿಸುತ್ತಿದು ।
ಜ್ಜ್ವಲತರಶಕ್ರಚಾಪಲತೆಯೋ ಎನಿಪಂತಿರೆ ಕಾಂತಿಯಿಂ ತಳ
ತ್ತಳಿಸುವ ಕಾಂಚಿಕಿಂಕಿಣಿಯುಳಂಕೆಯೊಳೇಂ ಕರವೊಪ್ಪುತಿರ್ದುದೋ
॥೩೧೬॥

ವಿನುತನವಗ್ರಹವಬಲೆಯೊ
ಳನುಗ್ರಹಂಬಡೆಯಲೆಂದು ಬೊಟ್ಟಿಟ್ಟುದೊ ಪೇ ।

ಜೆನೆ ರತ್ನಖಚಿತಕಾಂತಿಯಿ
ನನುದಯವಾಗಿರ್ದವಂಗುಲೀಯಕನಿಕರಂ ॥೩೧೭॥

ಸರಸಿರುಹದೊಳಾದಿತ್ಯನ
ಕಿರಣಂ ಸಂಕ್ರಮಿಸುವಂತೆ ದಮಯಂತಿಯ ಸ ।
ತ್ಕರಸರಸಿಜಮಣಿಬಂಧದೊ
ಳುರುತರವೆನೆ ರತ್ನವಳಯವೇನೊಪ್ಪಿದವೋ ॥೩೧೮॥

ನಾರಿಯ ನುಣ್ಪುವೆತ್ತ ನಳಿತೋಳ್ಗಳೊಳಿಕ್ಕಿದ ನೂತ್ನರತ್ನ ಕೇ
ಯೂರವಳಂಕೆವೆತ್ತವತಿನಿರ್ಮಳಕೋಮಳ [ವಿಂದು] ಕಾಂತದಿ ।
ಗ್ವಾರಣದಂತದೊಳ್ ತುಡಿಸಿದುಜ್ಜ್ವಲಸದ್ವಳಯಂಗಳೆಂಬ ವಿ
ಸ್ತಾರವನಪ್ಪುಕೆಯ್ದು ರುಚಿರದ್ಯುತಿ ಪರ್ವೆ ದಿಶಾಂತರಾಳಮಂ ॥೩೧೯॥

ಭಾವಿಸೆ ನೀಳ್ದಪಾಂಗರುಚಿ ಸಾರ್ದಿಟಿತಂದುಱೆ ನಾಭಿಕೂಪವಂ
ತೀವುವುದೆಂಬಿನಂ ಪೃಥುಳತುಂಗಕುಚದ್ವಯಮಧ್ಯದೊಳ್ ಮಯೂ ।
ಖಾವೃತವಾಗಿ ಸಲ್ಲಲಿತನಿಸ್ತುಳಮೌಕ್ತಿಕಹಾರಯಷ್ಟಿ ಶೋ
ಭಾವಹವಾಯ್ತು ರಾಜಸಭೆಗುತ್ಪಲನೇತ್ರೆವಿದರ್ಭಪುತ್ರಿಯಾ ॥೩೨೦॥

ಅಸಿಯಳ ಕುಚಕಳಸಂಗ
ಳ್ಗೆ ಸಮಸ್ತರ ದೃಷ್ಟಿ ಹತ್ತದಂತಂಗಭವಂ ।
ಹೊಸ[1]ತಗಡಂ[1] ತೊಡೆದಂದದಿ
ನೆಸೆಗುಂ ಕಸ್ತೂರಿ [2]ವಕ್ತ್ರ[2]ದಲ್ಲಿ ನಿತಾಂತಂ ॥೩೨೧॥

ಸದಮಳನೂತ್ನರತ್ನಖಚಿತಸ್ಫುಟವೃತ್ತದಿನೂರ್ಜಿತಪ್ರಭಾ
ವದಿನುರುಗಂಡಮಂಡಲವನಪ್ಪಿ ಮಹಾಭ್ಯುದಯಪ್ರಸಿದ್ಧಿಯಿಂ ।
ಸುದತಿಯ ಕರ್ಣಪತ್ರವೆರಡುಂ ಪರಿರಂಭಿಸುತಿರ್ಪುದಾವಗಂ
[ವ]ದನಶಶಿಪ್ರರೋಹರಥಚಕ್ರಯುಗಂಗಳಿವೆಂಬ ಮಾಡ್ಕೆಯಿಂ ॥೩೨೨

ಸತಿಯ ನೊಸಲರ್ಧಚಂದ್ರಾ
ಕೃತಿಯುದಱಿಂ ಪನಿತ ಸುಧೆಯ ಬಿಂದುಗಳೆಂಬಂ ।
ತತಿಶಯನಯದಿಂ ಪೊಸಮೂ
ಕುತಿ ಮೆಱೆದತ್ತುಜ್ಜ್ವಲಪ್ರಭಾವ[3]ಸ್ಥಿತಿ[3]ಯಿಂ ॥೩೨೩॥

---

[1] ತಗ್ಡಂ. [2] ಪತ್ರ. [3] ಸ್ತುತಿ.

ಯುವತಿ ನವನಳನಿದಾನವ
ನವಳೋಕಿಸಲೆಚ್ಚೆಕೊಂಡ ದಿವ್ಯಾಂಜನದಂ ।
ತೆ ವಿಳಾಸಂಬೆತ್ತಿರ್ದುದು
ಕುವಳಯದಳಲೋಚನಾಂಜನಂ ರಂಜನದಿಂ ॥೩೨೪॥

ನೀಲನವಮೇಘಮಂಡಲ
ದಾಲೋಲತಟಿಲ್ಲತಾವಿತಾನದ ಸೊಬಗಂ ।
ಸಾಲಿಡುತಿರ್ದುದು ಸತತಂ
ಬಾಲೆಯ ಸೂಸಕದ ಜೂಳೆಯದ ರುಚಿಜಾಳಂ ॥೩೨೫॥

ವ॥ ಅಂತು ಕೈಗೆಯ್ದು,

ದೆಸೆಯಂ ಬಾಸಣಿಸುತ್ತಪಾಂಗರುಚಿಯಿಂ ಹಸ್ತಾಗ್ರದಿಂ ಮೇಲುದಂ
ಸಸಿನಂಗೆಯ್ಯುತಮೊಯ್ಯನೊಯ್ಯನಿಡುತಂ ಪಾದಂಗಳಂ ಲಜ್ಜೆಯಿಂ ।
ನಸು ಬಾಗುತ್ತೆನಗಾತ್ಮನಿಶ್ಚಿತವರಂ ಕೈಸಾರ್ವನೆಂತೆಂದು ಚಿಂ
ತಿಸುತಂ ಮಂಗಳಮಂಟಪಕ್ಕೆ ಸತಿಯೆಯ್ತಂದಳ್ ನಿಜಾನಂದದಿಂ ॥೩೨೬॥

ಮನಸಿಜಮೋಹನಾಸ್ತ್ರವಬಲಾಕೃತಿಯಾದುದೊ ಚಂದ್ರಲೇಖೆ ಕಾ
ಮಿನಿಯೆನಿಸಿತ್ತೊ ನಿರ್ಮಲಸುಧಾರಸವಂಗನೆಯಾಯ್ತೊ ಮಿಂಚು ಮಾ।
ನಿನಿಯೆನಿಸಿತ್ತೊ ಭೂಮಿಗೆ ರತಿ ತಾನಿಳಿತಂದಳೊ ಪೇಡೆನಲ್ಕೆ ಮೋ
ಹನತರಮೂರ್ತಿಯಂ ತಳೆದು ಭಾವಕಿ ಬಂದಳತೀವಲೀಲೆಯಿಂ ॥೩೨೭॥

ಸುದತೀಯೌವನರಾಜ್ಯಮಂ ವಿಭವದಿಂದಾಳ್ವನ್ನನಂ ಭೇದಿಸಲ್
ಮದನಂ ಲಕ್ಷಣಯುಕ್ತಹಸ್ತಿನಿಯನೀಗಳ್ ಸಿಂಗರಂಗೆಯ್ದು ಹ।
ಸ್ತದೊಳೀಮಾಲೆಯನಿತ್ತನೋ ದಿಟಮೆನಲ್ ಪೇಡೆಂಬಿನಂ ಮಂದಯಾ
ನದಿನೆಯ್ತಂದಳಪಾಂಗಕಾಂತಿ ಸೆಣಸಲ್ ಭೂಪಾಲಭೂಷಾರ್ಚಿಯೊಳ್ ॥

ನಗೆಮೊಗದಿಂ ಸಖೀಜನಮನೀಕ್ಷಿಸುತಂ ನಯದಿಂ ನಿಮಿರ್ದ ಸೆ
ಳ್ಳುಗುರ್ಗಳಿನೊಯ್ಯನೊಯ್ಯನಳಕಾಳಿಯನಂಟುತಮುನ್ನತಸ್ತನಂ।
ಪೊಗರೆಸೆಯಲ್ ಕದಕ್ಕದಿಸೆ ಮೆಲ್ಲಡಿಯಿಕ್ಕುತಷ್ಟಾಗಳೆಲ್ಲರ
ಕ್ಷಿಗೆ ಸೊಗಸಂ ತುಳುಂಕುತಮವಳ್ ನಡೆತಂದಳನೂನರಾಗದಿಂ ॥೩೨೯॥

ಸತಿ ತಾಂಬೂಲಕರಂಕವಾಹಿನಿಯ ಮುಂಗಯ್ಯೊಳ್ ಕರಂ ತನ್ನ ಪಾ
ಣಿತಳಂ ಶೋಭಿಸೆ ಚಾಮರಂ ಧವಳ ಚಂಚತ್ತಾಳವೃಂತಂ ಸಮಂ।

ತು ತಳಂಗೊಂಡೊಡನೆಟ್ಟಿರಲ್ ಮದನರಾಜ್ಯಶ್ರೀಲಸನ್ಮೂರ್ತಿವೆ
[1]ತ್ರಿತೆ[1]ನಲ್ ಭೀಮತನೂಜೆ ಪೊಕ್ಕಳೊಲವಿಂದುದ್ವಾಹಗೇಹಾಂತವಮಂ ॥೩೩೦॥

ವ॥ ಅಂತು ಬಂದಿರ್ಪುದುಂ,

ಭಾವಕಿ ಪಾದಪಲ್ಲವದ ಕೆಂಪಿನ ಶೋಭೆಯೊಳಿತ್ತಳೆಂಬ ಮಾ
ತೇವುದನೇಕಪಾರ್ಥಿವಕುಲಕ್ಕವಕೇಶಿವೆಸರ್ಗಳಿಲ್ಲದಿ ।
ನ್ನಾವನ ನುಣ್ಣೊಸಲ್ಗೆ [ಮುದದಿಂ] ಪದಪಟ್ಟವನೀವಳೆಂದು ನಾ
ನಾವಿಷಯಾಧಿಪರ್ ಪದತಳಂಗಳನೀಕ್ಷಿಸುತಿರ್ದರಾಕೆಯಾ ॥೩೩೧॥

[ಯಾ]ವಕರಾಗಮಂ ಪೊರೆದರೇಕೆಯೊ ಮೆಲ್ಲಡಿಗಳ್ಗೆ ಕಾಂತೆಯರ್
ದೇವಿ ನೃಪಾಲಚಿತ್ತದನುರಾಗರಸಂ ನಿಜಪಾದಪದ್ಮಮಂ ।
ತೀವಿ [2]ವಿಲೋಚನಭ್ರಮರ[2]ವಕ್ಕಜದಿಂ ಭ್ರಮಿಸುತ್ತಿರಲ್ಕೆ ಪೇಟ್
ಕೋವಿದೆಯೆಂದು ಪಾದತಳವಂ ಪದೆದೀಕ್ಷಿಸುವರ್ ನೃಪಾಲಕರ್ ॥೩೩೨॥

ಮದನಂ ವಿರಹಿಗಳಂ ಕಾ
ಯದೆ ಕಡುಪಿವೆಚ್ಚಂದುಣ್ಮಿದರುಣಾಂಬುವಿನ ।
ಗ್ಗದ ಕೊಗ್ಗೆಸಱೊಳ್ ಸತಿಯಱ
ಯದೆ ಪದವಿಟ್ಟಂತೆ ಚರಣದರುಣಿಮಮೆಸೆಗುಂ ॥೩೩೩॥

ಸತಿಯ ಪದದ್ವಯಂ ಲಲಿತಪಲ್ಲವದೊಪ್ಪಮನಾಂತವೀಗಳೀ
ಗತಿಶಯಪುಷ್ಪಸಂತತಿಯುರಲ್ದು ಪೊದಟ್ದಪುವಿಂ ಮನೋರಥೋ ।
ನ್ನತಫಲಸಿದ್ಧಿ ತಪ್ಪದೆಮಗೆಂದು ನೃಪಾಲಕರೀಕ್ಷಿಸುತ್ತಿರಲ್
ಸಿತರುಚಿ[ಯುಣ್ಮಿ]ಸಿರ್ಪ ನಖಪಂಕ್ತಿಗಳೊಪ್ಪಿದವಬ್ಜನೇತ್ರೆಯಾ ॥೩೩೪॥

ಅಂಬು[ಜ]ಪದದೊಪ್ಪ[ವ]ನೆ
ಲ್ಲಂ ಬಯಸಿ ನಿರೀಕ್ಷಿಸಲ್ಕೆ ಬೆಳುಗಂಗಳ ಡಾ ।
ಳಂ ಬಳಸೇ ಹತ್ತಿರ್ದ[ಪ]
ವೆಂಬಿನವೆಸೆದಿರ್ದುವವಳ ನಖದೀಧಿತಿಗಳ್ ॥೩೩೫॥

ಪದಕಮಲದ ಕೆಲಕೆಲದು
ಣ್ಮಿದ ಮೊಗ್ಗೆಗಳಂತೆ ಕಾಂತಿವೃತ್ತದಿನಿಂಪಂ ।
ಪುದಿದೆಸೆದಿರ್ದುವು ಪೆಂಪಿಂ
ಸುದತಿಯ ಮೃದುಗೂಢಗುಲ್ಫವಲ್ಪೋನ್ನತಿಯಿಂ ॥೩೩೬॥

1 ತ್ರುದೆ. 2 ವಿಲೋಚಭಮರ.

ಮನಸಿಜನೊಲ್ದು ತನ್ನ ಬಿನದಕ್ಕೆಡೆಯಾಡುವ ಪೂಗೊಳಂಗಳೊ
ತ್ತಿನೊಳೊಗೆದಿರ್ದನೆಕ್ಕೊರೆಯ ನುಣ್ಬೊಡೆಯಂಬಿನವೇಟ್ಗೆವೆತ್ತು ಕ ।
ಣ್ಗನುನಯವಾಗಿ ನೆಪ್ಪುವಡೆದುಜ್ಜ್ವಲಕಾಂತಿಯಿನೊಳ್ಪುವೆತ್ತ ತ
ದ್ವನಿತೆಯ ಜಂಗೆಗಳ್ ವಿಟರ ಚಿತ್ತದ ಶಂಕುಗಳಲ್ತೆ ಸಂತತಂ ॥೩೩೭॥

ಅಲರ ಸರಂಗಳಿಂ ಜಗಮನಂಡಲೆಯಲ್ ಮದನಂ ಜಯಕ್ಕೆ ಬೆಂ
ಬಲವೆನಗೆಂದು ನೆಮ್ಮುವೆಡೆಯಾದುದಱಿಂ ಸುವಿಟರ್ ನಿರಂತರಂ ।
ಲಲನೆಯ ಚೆಲ್ವ ನುಣ್ದೊಡೆಗಳಂ ಪದಪಿಂ ರತಿಪಂಗೆ ಯುದ್ಧದೊಳ್
ತೊಲಗದ ಕಂಭವೆನ್ನದೆಳೆವಾಳೆಯ ಕಂಭಮನೇಕೆ ಪೋಲಿಪರ್ ॥೩೩೮॥

ಸತತಮನಂಗನುಂ ರತಿಯುಮುತ್ಸವಕೇಳಿಯೊಳಿಪ್ಪೆವೆಂದು ತ
ಮ್ಮತಿಶಯಹಸ್ತಕೌಶಲತೆಯಿಂ ಮಿಗೆ ಬಟ್ಟಿದುವಾಗೆ ಮಾಡಿದಾ ।
ಕೃತಕನಗಂಗಳೆಂಬ ತೆಱದಿಂ ಕಡು ಬೆಟ್ಟಿದವಾಗಿ ರಂ[ಜಿಕುಂ]
ಸತಿಯ ನಿತಂಬಮುರ್ವಿಪಮ್ಮೃಗಾವಳಿಗುಕ್ಕೆವದಿಕ್ಕೆಯೆಂಬಿನಂ ॥೩೩೯॥

ಸರಸತಿಯೆನಿಪಾ ತರುಣಿಯ
ಗುರುತರನಿರ್ಮಲನಿತಂಬತಟಮಂ ನೋಡಲ್ ।
ವಿರಹಿಗಳ ನಯನಲತೆಯಂ
ಕುರಿಸದೆ ಪಲ್ಲವಿಸದುರ್ಬದಿರ್ಕುಮೆ ಸತತಂ ॥೩೪೦॥

ಮೃಗನೇತ್ರೆಯ ಬಡನಡುವಂ
ಮುಗುಳಂಬಿಂ ಮದನನೆಚ್ಚಕಲೆಗುಟಿಯುಂತಾ ।
ವಗಮೆಸೆದಿರ್ದುದು ಗಂಭೀ
ರಗುಣಂಬೆತ್ತಿರ್ದ ನಾಭಿ ಭೀಮಾತ್ಮಜೆಯಾ ॥೩೪೧॥

ಶೃಂಗಾರಂ ಕಾಂತೆಯ ಸ
ರ್ವಾಂಗವನಾವರಿಸಲಡರ್ದ ನಿರ್ಮಳಸೋಪಾ ।
ನಂಗಳಿವೆಂಬಂತೆಸೆಗುಂ
ಕಂಗೊಳಿಪ ವಳಿತ್ರಯಂಗಳಾ ಕೋಮಳೆಯಾ ॥೩೪೨॥

ಮನಸಿಜನಸಿತಲತೆಗೆ ನಿ
ರ್ವನೆ (?) ಹೊಗರೆತ್ತಿದಂತೆ ನುಣ್ಪಂದೆಸೆಗುಂ ।
ಜನನಯನಾಂಜನವೆಂಬಂ
ತನುನಯದಿಂ ರೋಮರಾಜಿ ಭೀಮಾತ್ಮಜೆಯಾ ॥೩೪೩॥

ನಾರಿ ಧರಿತ್ರಿಯೊಳ್ ಜನಿಸಿದಾಗಳೆ ತೆಳ್ವಸಿಱೊಳ್ ಸಮಸ್ತ ಶೃಂ
ಗಾರರಸಂ ಕಳಾಳಿ ಪುಗುತಂದು ಮನೋಹರಮಾರ್ಗಮೆಂಬ ವಿ।
ಸ್ತಾರವನಪ್ಪುಕೆಯ್ದು ವಿಟಲೋಚನಮಂ ಸೆಱೆಗೆಯ್ದು ಮಂಗಳಾ
ಕಾರದಿನಿರ್ಪ ನಾಭಿವಿವರಂ ಮೆಱೆಗುಂ ಶತಪತ್ರನೇತ್ರೆಯಾ ॥೩೪೪॥

ಅಡಿಗಡಿಗೆ ಮನಸಿಜಂ ಕಂ
ಡೆಡೆಯೊಳ್ ದಮಯಂತಿ ಪದುಳವೆಯೆಂದಪ್ಪಲ್ ।
ಕಡುಬಡವಾದುದಲ್ಲದೀ
ಬಡತನವೆಲ್ಲಿಯದು ಬಗೆಯೆ ನೃಪಪುತ್ರಿಕೆಯೊಳ್ ॥೩೪೫॥

ತನ್ನೊಡಹುಟ್ಟಿದ ಜಘನಸ
ಮುನ್ನತಿಯಂ ಕಂಡು ಕಂಡು ಬಡವಾಗಿರ್ದಾ ।
ಕನ್ನೆಯ ಸೆಳೆನಡುವುಂಟಿ
ಲ್ಲೆನ್ನಿಸಲರಿದೆಂಬ ತೆಱದಿನೇನೊಪ್ಪಿದುದೋ ॥೩೪೬॥

ನಳಿತೋಳ್ಗಳ್ ಭುಜಗಮ್ಮೃಗಾ
ವಳಿಪಾಶನಖಪ್ರಸೂನೋತ್ಕರಸಮ್ಮಿಳಿ (?) ।
ತ ಲತಾಳಿಗಳಂ ಗಜತೂ
[1]ಲಾಲಾನದ[1] ದಂಡವೆನ್ನದೇನೆಂಬುದವಂ ॥೩೪೭॥

ವ್ರಣಕಿಣಕುಂಭಮಂ ಸದೃಶವೆನ್ನದೆ ನಿತ್ಯಮುಗಲ್ವ ಕೋಕಮಂ
ಗಣಿಸದೆ ಕಾಯ್ದು ಕಣ್ಣಿಡುವ ಹೊಂಗಳಸಂಗಳನಾವಮಾಟ್ಕೆಯಿಂ ।
ದೆಣೆಗುಡದೇಟ್ಗೆಯಿಂ ಬೆಳೆದು ನಿಶ್ಚಳಮೆಂಬಿನಮೊಪ್ಪುವಂಗನಾ
ಗ್ರಣಿಯ ಕುಚಂಗಳಂ ರತಿಯ ಕಾಂತನ ಕಂದುಕವೆಂಬುದೊಪ್ಪದೇ ॥

ಮನಸಿಜರಾಜ್ಯಲಕ್ಷ್ಮಿ[ಗೆ] ಸಮಂತಭಿಷೇಕಮನೊಲ್ದು ಮಾಟ್ಪಮೋ
ಹನ ಮದಹಸ್ತಿ ಹಸ್ತದೊಳಮರ್ದ ಸುಧಾಪರಿಪೂರ್ಣಕುಂಭಮೆಂ ।
ಬಿನಮತಿವೃತ್ತದಿಂ ರುಚಿರಕಾಂತಿಯಿನುನ್ನತಿವೆತ್ತು ರಂಜಿಪಂ
ಗನೆಯ ಕುಚದ್ವಯಂ ವಿಟಮನೋಜಯಮಂ ನೆಯಮಂ ನಿಮಿರ್ಚುಗುಂ ॥೩೪೯॥

ಅಂಗಜನ ಮನದ ಬಯಕೆಯ
ಹೊಂಗೊಡನಗ್ಗಳದ ವಿಟರ ಬಯಕೆಯ ಪೂಜಾ ।
ಲಿಂಗಮುವೆನ್ನದೆ ಸತಿಯ ಕು
ಚಂಗಳನಸದೃಶದಲೇಕೆ ವರ್ಣಿಪರರೆಬರ್ ॥೩೫೦॥

[1] ಲಾಲಸದ.

ಶೃಂಗಾರರಸಂ ತೀವಿದ
ಹೊಂಗಳಸಂ ಭುವನವಿಜಯಮನಸಿಜಮದವಾ |
ತಂಗಕಮನೀಯಕುಂಭಂ
ಜಂಗಮಲತೆಭೀಮಸುತೆಯ ಘನಕುಚಯುಗಳಂ ||೩೫೧||

ಸತಿಗೆ ಸಮಸಂದ ಹೃದಯ
ಶ್ರುತಿತ್ರಯಂ ಮೂರ್ತಿವೆತ್ತು ಪೊಱಪೊಣ್ಮಿದವೆಂ |
ಬತಿಶಯಕೋಮಳರೇಖಾ
ತ್ರಿತಯಂ ರಂಜಿಸುವ ಕಂಬುಕಂದರಮೆಸೆಗುಂ ||೩೫೨||

ಮೃಗಶಿಶುನೇತ್ರೆಯಾನನರಸಂ ಕೆಳಸೋರ್ದಪುದೆಂಬ ಚಿಂತೆ ಕೈ
ಮಿಗೆ ಮದನಂ ಪ್ರವಾಳದೆಡೆಗಟ್ಟೆಯನೊಪ್ಪಿರೆ ಕಟ್ಟಿದಂತೆ ಕಾ |
ಮಿಗಳತಿಜೀವನಕ್ಕೆ ನೆಲೆಯಾಗಿಸುವಾ ಪರಿಪೂರ್ಣದಿಂ ಕರಂ
ಸೊಗಸಿನ ಸೀಮೆಯಾದಧರಬಿಂಬಮನೇನೊಗಟ್ವೆಂ ಪುರಂಧ್ರಿಯಾ||೩೫೩||

ನಲ್ಲಳ ವಿಮಳಸುಧಾಧರ
ಪಲ್ಲವವರ್ಧಿಸುವವರ್ಗೆ ಕಾಮಿನಿಯೊಲಿ[ಯ]ಲ್ |
ಬಲ್ಲವಕತತಿಗೆಯದು ಸಂ
ಪಲ್ಲವವಲ್ಲದೆ ಸಮಗ್ರವೆನೆ ರಂಜಿಸುಗುಂ ||೩೫೪||

ವದನಸುಧಾಕರಬಿಂಬದೊ
ಳೊದವಿದ ವಟವಿಟಪಿಯೆಸವ ತನಿವಣ್ ತಾನ |
ಪ್ಪುದಱಿಂದರುಣದ್ಯುತಿಯಿಂ
ಸುದತಿಯ ಬಿಂಬಾಧರಂ ಕರಂ ರಂಜಿಸುಗುಂ ||೩೫೫||

ವಿಮಳಸುಧಾಧರದಿಂದೊಂ
ದಮೃತದ ಪನಿ ಬಿರ್ದು ಬಿರ್ದು ಗುಟಿಯಾಯ್ತೆಂಬಂ |
ತಮದೊಪ್ಪಂಬೆತ್ತಿರ್ದುದು
ರಮಣಿಯ ಚಿಬುಕಂ ನಿತಾಂತಕಾಂತಿಸ್ತಬಕಂ ||೩೫೬||

ಸತತಂ ಲಜ್ಜಾವಿನಮ್ರಾನನಸರಸಿಜಸತ್ಕರ್ಣಿಕಾಕಾರದಿಂ ಸಂ
ಸ್ತುತಿವೆತ್ತಾಮೋದವಿಸ್ತಾರದಿನೆಸೆವ ಪುರಂಧ್ರೀಲಸನ್ನಾಸಿಕಂ ದೀ |
ಧಿತಿಯಿಂ ಚೆಲ್ವಾದ ಮುಕ್ತಾಫಲಮವಿರಳಮಾಗಿರ್ದ ಚಿತ್ತಪ್ರಿಯಗರ್ಾ
ಯತದಿಂ ಪ್ರಾಣಾನಿಲಂ ನೂರ್ಮಡಿಸುವ ತೆಱನಂ ಮಾಟ್ಪುದೇಂ ಚಿತ್ರ
ಮಾಯ್ತೋ ||೩೫೭||

ನವಮುಕ್ತಾಶುಕ್ತಿಕೆಯಿಂ
ಬ ವಿಶೇಷಕ್ಕುಪಮೆವೆತ್ತು ಶುಭಚರಿತಕಥಾ।
ರ್ಣವನಾವೆಯೆನಿಪ ಸುದತಿಯ
ಕಿವಿಯಂ ಗವಿಯೆನ್ನದಿರ್ಪರೊಳರೆ ನಿತಾಂತಂ ॥೨೫೮॥

ತನ್ನಯ ರೂಪಂ ನೋಡಲ್
ಕನ್ನಡಿಯೊಂದೆಯ್ದದೆಂದೆರಟ್ಕನ್ನಡಿಯಂ ।
ಕನ್ನೆಯುಮರ್ಚಿದಳೆಂಬಂ
ತುನ್ನತಿಯಿಂ ಮೆಱೆದುದವಳ ಲಲಿತಕಪೋಲಂ ॥೨೫೯॥

ಮನಸಿಜನಂಗನಾವಿರಹಕಾತರರಂ ತಿವಿಯಲ್ಕೆ ಪೆತ್ತ ಕೂ
ರ್ಮೊನೆಯಲಗೋ ವಿಟರ್ಗೆ ಮದನಾಗಮಮಾರ್ಗವನೊಪ್ಪಿ ತೋರ್ಪ
ಮಿಂ ।
ಚಿನ ಬೆಳಗೋ ಭುಜಂಗಮೃಗಸಂಗಮನಾರ್ದೆಸೆಯಲ್ ತೊಡರ್ಚಿದಂ
ಬಿನಬೆಳಗೋ ಎನಲ್ ಸೊಗಯಿಕುಂ ಕಡೆಗಣ್ ಶತಪತ್ರನೇತ್ರೆಯಾ॥೨೬೦॥

ಚಳನಯನಂಗಳಂ ಕುಸುಮಸಾಯಕನೊಪ್ಪಿರೆ ಕೂರ್ತು ಮಾಡಿದಂ
ಹಟವಿಗೆಯಂ ತನೂದರಿಯಪಾಂಗಮರೀಚಿಗಳಿಂದ ಮಾಡಿದಂ।
ಪಳಹರವಂ ಕರಂ ತನಗೆ ವಜ್ರದ ವರ್ಮವನೊಲ್ದು ಮಾಡಿದಂ
ಬೆಳತಿಗೆ ಕಣ್ಣ ಡಾಳವನೆನಲ್ ಮೆಱೆಗುಂ ನಯನಂ ಮೃಗಾಕ್ಷಿಯಾ॥೨೬೧॥

ಅನುಪಮಕಾಂತಿಯಿನೊಪ್ಪುವ
ವನರುಹವದನೆಯ ವಿಶಾಲಲೋಚನಯುಗವಂ ।
ಮನಸಿಜನ ಕಯ್ಯ ಕವಲಂ
ಬಿನಲಲ್ಲದೆ ಪೆಱತನುಪಮೆಗೆಯ್ವುದನುಚಿತಂ ॥೨೬೨॥

ಎವೆಗಳೆಸಳೊಸರ್ವ ಡಾಳಂ
ನವಮಧುರಸಮೆಸೆವ[ಕಪ್ಪು]ಮಱಿದುಂಬಿಯೆನಲ್ ।
ಯುವತಿಯ ಲೋಚನಯುಗಮಂ
ಕುವಲಯಜಲಜಕ್ಕೆ ಸದೃಶಮೆಂಬುದು ಪುಸಿಯೇ ॥೨೬೩॥

ನಯನತ್ರಿಭಾಗಮಾಯ್ತಾ
ದಿಯೊಳಚ್ಚರಿಯಿಂ ತ್ರಿವರ್ಗಮುವು ಪಚ್ಚುಗೊಳಲ್ ।
ಪ್ರಿಯದಿಂದಲ್ಲದೊಡಬಲೆಯ
ನಯನವಿಭಾಗಕ್ಕೆ ಕಾರಣಂ ಪೆಱತುಂಟೇ ॥೨೬೪॥

ಮದನಂ ಪ್ರಿಯದಿಂ ನಯನಾಂ
ತದೊಳಂಜನರೇಖೆದೆಗೆವ ಪದದೊಳ್ ಮಱೆದೋ ।
ಪದಿ ಮೇಲೆ ರೇಖೆದೆಗೆದಂ
ದದಿನೆಸೆಗುಂ ನಿಮಿರ್ದ ಪುರ್ಬು ಕಮಲಾನನೆಯಾ ॥ ೩೬೫ ॥

ವನಿತೆಯ ಮುಖವಾದಂ ಶಶಿ
ಯೆನಗಿನ್ನಿವಳುತ್ತಮಾಂಗವೆಡೆಯೆಂದೊಲ್ದಾ ।
ತನ ಕಪ್ಪು ನೆಲಸಿದತ್ತೆನೆ
ಯನುನಯದಿಂ ಕುಟಿಲಕುಂತಳಂ ರಂಜಿಸುಗುಂ ॥ ೩೬೬ ॥

ಅಲಿವರಳ್ಗಳನೊಳಕೊಂ
ಡಾಲಂಬಿಸುವಮಳನೀಲಮೇಘದ ತೆಱನಂ ।
ಹೋಲಿಸಲೊಲ್ಲದೆ ಪೆಱತಂ
ಹೋಲಿಸುವುದೆ ಸತಿಯ ಮಿಸುಪ ಪೊಸಪೂಮುಡಿಯಂ
॥ ೩೬೭ ॥

ಹಿಮಕರಬಿಂಬಮಂ ಸುಧೆಯೊಳದ್ದಿದವೊಲ್ ನಯಕಾಂತಿವೆತ್ತ ಚೆ
ಲ್ವಮರ್ದ ಮುಖಂ ಪ್ರವಾಳಲತೆಯಂ ಪೊಸಮಾಣಿಕದೊಪ್ಪವಿಟ್ಟವೊಲ್ ।
ನಿಮಿರ್ದಧರಂ ಮನೋಜನಲಗಂ ಕುಡಿಮಿಂಚಿನೊಳದ್ದಿದಂತೆ ತೋ
ರ್ಪಮಳವಿಲೋಚನಂ ಮೆಱೆವುತಿರ್ದವು ನೀರಜಪತ್ರನೇತ್ರೆಯಾ ॥ ೩೬೮ ॥

ಅಕಳಂಕೇಂದುನಿಭಾಸ್ಯೆಯಾಭರಣದಿಂ ಕೆಯ್ಗೆಯ್ದು ಸೌಗಂಧಮಾ
ಲಿಕೆಯಂ ಹಸ್ತದೊಳಾಂತು ನಾಲ್ಕುದೆಸೆಯಂ ತನ್ನಂಕದೊಳ್ ಸಂದ ನಾ ।
ಯಕನಂ ನೋಡುತ ಮಂದಹಾಸಮೆಸೆಯಲ್ ಸೌಂದರ್ಯಸಲ್ಲಾಪಕೌ
ತುಕವಂ ಸಾಲಿಡುತಾಳಿಯರ್ಗೆ ನಡೆತಂದಳ್ ಕಾಂತೆ ಸಂಪ್ರೀತಿಯಿಂ
॥ ೩೬೯ ॥

ಬಾಲಕಿ ಸೌಗಂಧಿಕನವ
ಮಾಲಿಕೆಯಂ ಪಿಡಿದು ಬಂದಳಡರ್ದೀಕ್ಷಿಪ ಭೂ ।
ಪಾಲರ ನಿಮಿರ್ದ ವಿಲೋಚನ
ಮಾಲಿಕೆಯಂ ತಳೆದಳೆಂಬ ತೆಱದಿಂದಾಗಳ್ ॥ ೩೭೦ ॥

ನಾಕಿಗಳಂದದಯ್ವರಿವರಾಕೃತಿಯಂ ದಮಯಂತಿಕಾಂತೆಯಾ
ಳೋಕಿಪಳಲ್ಲದೆಮ್ಮನವಳೋಕಿಪಳೇ ವರಿಸಲ್ಕೆನುತ್ತತಿ ।
ವ್ಯಾಕುಳಚಿತ್ತರಾಗಿರೆ ನೃಪಾಲಕರಂಗಜಮಂತ್ರಮೂರ್ತಿಯಂ
ತಾಕೆ ಸಭಾಸ್ಥಳಕ್ಕೆ ವನಮಾಲಿಕೆಯಂ ಪಿಡಿದೊಯ್ಯನೆಯ್ದಿದಳ್ ॥ ೩೭೧ ॥

ಇದು ಮಾಣಿಕ್ಯದ ಮಾಲೆಯೋ ರುಚಿರಮುಕ್ತಾಮಾಲೆಯೋ ನೀಲರ
ತ್ನದ ನುಣ್ಮಾಲೆಯೊ ಪೇಡೆನಲ್ಕಧರರಾಗಂ ನೀಳ್ದಪಾಂಗಾಂಶು ನೀ ।
ರದವರ್ಣಾಳಕಕಾಂತಿಭೂಷಣಮಣಿಪ್ರದ್ಯೋತಿ ತೇರ್ರೈಸಿ ಪ
ರ್ವಿದ ಸೌಗಂಧಿಕಮಾಲೆಯಂ ಧರಿಸಿದಳ್ ತನ್ವಂಗಿ ಹಸ್ತಾಗ್ರದೊಳ್॥೩೭೨॥

ಮಿಗೆ ತನುಕಾಂತಿಯಿಂದೆಸೆವ ಕಂಪಿನ ಸಂಪಗೆಮಾಲೆಯಂತೆ ಸೆ
ಳ್ಳುಗುರ್ಗಳ ಕಾಂತಿಯಿಂ ಸದೃಶಮಿಲ್ಲದ ಮಲ್ಲಿಗೆಮಾಲೆಯಂತೆ ಪಾ ।
ಣಿಗಳುರುಕಾಂತಿಯಿಂ ಸೊಬಗುಗುಂದದ ಬಂದುಗೆಮಾಲೆಯಂತೆ ತೋ
ರ್ಪಗಣಿತಗಂಧದಿಂ ಮಿಸುಪಮಾಲಿಕೆಯಂ ಪಿಡಿದಾಕೆಯೆಯ್ದಿದಳ್॥೩೭೩॥

ಅಬಲೆ ನಿಜಸ್ವಯಂವರಮಹೋತ್ಸವದೊಪ್ಪುವ ಪುಷ್ಪಮಾಲೆಯಂ
ನಿಬಿಡಕರಾಗ್ರದಿಂ ಪಿಡಿದಿರಲ್ ಮಱಿದುಂಬಿಯ ಬಂಬಲುಜ್ಜ್ವಲ ।
ಸ್ತಬಕನಿಭಕ್ಕೆ ಬಂದೆಱಗಿ ಝೇಂಕರಿಸಲ್ ಮೆಱೆದತ್ತು ನುಣ್ಚರಂ
ಸೊಬಗಿನ ಡಂಗುರಂಬಿಡಿದು ಸಾಱುವವೊಲ್ ದಮಯಂತಿಕಾಂತೆಯಾ
॥೩೭೪॥

ನಱುಗಂಪುಮೆಱೆವ ಸಂಪಗೆ
ಗೆಱಗಿದ ಮಱಿದುಂಬಿಯಂತೆ ಕಾಂತೆಯ ಕಯ್ಯೊಳ್ ।
ಮಿಱುಗುವ ಪೂಮಾಲೆಗೆ ಮೆ
ಯ್ಮಱೆದಿರ್ದುವು ನೃಪವಿಲೋಚನಭ್ರಮರಂಗಳ್ ॥೩೭೫॥

ವ॥ ಅನಂತರಂ,

ಭಾರತಿ ಭೀಮನಂದನೆಯ ಗಾಡಿಯುನೀಕ್ಷಿಸಲೆಂದು ಬಂದು ತ
ನ್ನಾರಿಯ ಮೇಳದಾಳಿಯರೊಳಾಕೆ ಕಳಾವತಿಯೆಂಬ ನಾಮವಿ ।
ಸ್ತಾರವನಾಂತು ತತ್ಸಮಯದೊಳ್ ದಮಯಂತಿಗೆ ದೇಶದು
ರ್ವೀರಮಣರ್ಕಳಂ ಪದೆದು ತೋಱಿಸುತಿರ್ದಳನೇಕಚಿತ್ರದಿಂ ॥೩೭೬॥

ವ॥ ಅದೆಂತೆನೆ,

ಯುವತೀರತ್ನವಮೂಲ್ಯವಂತದು ಶಿರೋಲಂಕಾರವಾಗುತ್ತಿರಲ್
ನವರತ್ನಾಭರಣಂಗಳಂಗಕಷಣಂ ತಾವಾಗಳೇಬಾಡ್ತೆಯೆಂ ।
ದು ವಿಶೇಷಾಂಬರರಂಜಿತಾವಯವನೀತಂ ಬಾಳಭೂಪಾಳನು
ತ್ಸವದಿಂದೀಕ್ಷಿಸು ಕಾಂತೆಯೆಂದು ಕುಱುಪಂ ಕಣ್ಸನ್ನೆಯಿಂ ತೋಱಿದಳ್ ॥

ಅಳವಡಲುಟ್ಟ ಗಂಡುಡಿಗೆ ಮಿಂಚುವ ಪಲ್ ಕಮನೀಯ ವೇಣಿ ವ
ರ್ತುಳತಿಳಕಂ ತಳತ್ತಳಿಪ ಮೆಯ್ವೆಳಗುನ್ನತಕಂಬುಕಂಠವ ।

ಗ್ಗಳವೆನಿಸಲ್ ಮನಂಗೊಳಿಸಿ ಕರ್ಣದೊಳುಜ್ಜ್ವಲಚಂಪಕಂ
ತೊಳಗುವ ಧರ್ಮಶೀಲನತಿಸಜ್ಜನಗೂರ್ಜರನಬ್ಜಲೋಚನೇ ॥೩೭೮॥

ಕೋಪದೊಳುರ್ಕೆಯೋ ತನಗೆ ಮೆಯ್ಸಿರಿ ಕರ್ಕಶದೇಹಿ ಸಂತತಂ
ಚಾಪಲಚಿತ್ತನುಗ್ರಮುಖನುದ್ಧತಸಾಹಸಿಕಂ ಪ್ರವಾಸಿ ಮಿ ।
ಥ್ಯಾಪರನಲ್ಪಕಾರ್ಯರತನೀತನನೀಕ್ಷಿಸು ಕಾಂತೆ ಕೊಂಕಣ
ಕ್ಷ್ಮಾಪತಿ ಕೊಂಕಣಂ ನಿನಗೆ ಕಿಂಕರನಪ್ಪೊಡೆ ಪಂಕಜೇಕ್ಷಣೇ ॥೩೭೯॥

ಸಂಗೀತಪ್ರಿಯನಲ್ಪ[1]ಜೀವಿ[1] ವಿಕಟಾಂಗಂ ಸಂತತಂ ಭೋಜನಾ
ಭ್ಯಂಗಾಸ್ವಾದಿ ನಿರಂತರಂ ವ್ಯಸನಿ ಕಾವ್ಯಾಲಾಪದೂರಂ ಸ್ಥಿರಂ ।
ಶೃಂಗಾರಾನ್ವಿತನೂರ್ಧ್ವರೋಮಶಭುಜಂ ನೋಡೀತನಂ ಕಾಂತೆ [2]ಸ[2]
ತ್ಸಂಗಕ್ಕಿರ್ದ ವರಾಳಭೂರಮಣನಂ ಕಾರುಣ್ಯನೇತ್ರಂಗಳಿಂ ॥೩೮೦॥

ವಿಲಸದ್ರಕ್ತವಿಭೂಷಣದ್ಯುತಿಕರಂ ಸರ್ವಾಂಗವಂ ಪರ್ವಿ ನಿ
ರ್ಮಲರೂಪಂ ತಳೆದಿರ್ದನಾತನಧಿಕಂ ಪುಣ್ಯಾತ್ಮಕಂ ಧಾರ್ಮಿಕಂ।
ಕುಲಪೂತಂ ಶುಚಿ ದೀರ್ಘದೇಹಿ ಸತತಂ ಭೋಗಪ್ರಿಯಂ ಸದ್ಭುಜಾ
ಬಲಯುಕ್ತಂ ಮಿಥಿಳೇಶನೀಕ್ಷಿಸೊಲವಿಂ ಋಕ್ಷೇಶಬಿಂಬಾನನೇ ॥೩೮೧॥

ಸುಕೃತಿ ದಯಾಲು ತೀವ್ರಭುಜವಿಕ್ರಮಿ ಸತ್ಕುಲಜಾತನೂರ್ಜಿತ
ಪ್ರಕಟಗುಣಾಧಿಕಂ ಛಲಿ ಕಳಾಕುಶಲಂ ಸುಖಿ ದೀರ್ಘಸೂತ್ರಿ ಲೌ ।
ಕಿಕಪರಮಾರ್ಥಲಕ್ಷಣವಿಚಕ್ಷಣನೀತನನೊಲ್ದು ನೋಡು ಭಾ
ವಕಿ ವರಕೋಸಲೇಶ್ವರನಧೀಶ್ವರನಪ್ಪೊಡೆ ಸತ್ಪಯೋಧರೇ ॥೩೮೨॥

ಕುಮತವಿಚಾರಿ ಗೋತ್ರಕಲಹಪ್ರಿಯನಾಗಮದ್ವೈವದೂರನ
ಕ್ರಮಯುತನರ್ಥರತ್ನಪತಿ ಮೂರ್ಖಜನಾಶ್ರಯನಿಂಗಿತಜ್ಞನ ।
ಸ್ತ್ರಮಿತವಿರೋಧಿಸೈನ್ಯನತಿಸಾಹಸಿ ಬಾಂಧವವೈರಿಯಿತ್ತಲು
ತ್ತಮಕುರುದೇಶವಲ್ಲಭನನೀಕ್ಷಿಸು ಪದ್ಮದಳಾಯತೇಕ್ಷಣೇ ॥೩೮೩॥

ಸತತಂ ಸತ್ಕವಿತಾಪ್ರಸಂಗನಿರತಂ ಸಂಗೀತಸಾಹಿತ್ಯವಿ
ಶ್ರುತನೌದಾರ್ಯಪರಂ ವಿಚಿತ್ರನವರತ್ನಾಲಂಕೃತಂ ಪಾಪವ ।
ರ್ಜಿತನತ್ಯಂತಕೃಪಾಲು ಭೋಗಿ ವನಿತಾಸಂಗಪ್ರಿಯಂ ನೋಡಲೇ
ಸತಿ ಕರ್ಣಾಟನೃಪಾಳನಂ ಗುಣಗಣಕ್ಷೀರಾಬ್ಧಿಕಲ್ಲೋಲನಂ ॥೩೮೪॥

---

[1] ಪಿ. [2] ವ.

ಕುಟಿಲಶರೀರಿ ಧರ್ಮಪರನಾಗಮಕೋವಿದನಿಂಗಿತಜ್ಞನು
ತ್ಕಟವಿನಯೋಕ್ತಿಶೀಲನಬಲಾಜನಲೋಲನತೀವಧೂರ್ತನ।
ಸ್ಫುಟಹೃದಯಂ ವಿಚಿತ್ರಧವಳಾಂಬರಶೋಭಿತನುಗ್ರವೈರಿದು
ರ್ಘಟನೆನಿಪಾಂಧ್ರಭೂಪತಿಯನಂಗನೆ ಭಾವಿಸಿ ನೋಡು ಗಾಡಿಯಿಂ॥

ಹಾರಾದ್ಯಾಭರಣಂ ಸುಗಂಧಕುಸುಮಂ ದಿವ್ಯಾಂಬರಂ ರತ್ನಕೋ
ಟೀರಂ ಚಂದನಕುಂಕುಮಾಗರುನಿಜಾಂಗಾಲೇಪನಂ ನೂತ್ನಕ।
ರ್ಪೂರಂ ಸಾರವನಾರತಂ ನೆಲಸಿದೀತಂ ಪಾಂಡ್ಯಭೂಪಾಲನೊ
ಳ್ಪೋರಂತೀಕ್ಷಿಸು ಕಾಂತೆ ಕಾಂತತನುವಂ ಸಂಪ್ರೀತಿಯಿಂದಾ[ಂ]ತನಂ॥

ಮೌಳಿಯೊಳಾಂತರತ್ನಮಕುಟಂ ಹಣೆಗಿಟ್ಟ ವಿಭೂತಿ ತೊಟ್ಟ ಭೂ
ಷಾಳಿ ವಿಳಾಸಿನೀನಿಕರಮಿಕ್ಕುವ ಚಾಮರಮಿಂದ್ರಭೋಗಮು।
ತ್ತಾಳಮನಂ ಶಿವಸ್ತುತಿಯಿನನಾರತಮೊಪ್ಪುವ ಪುಣ್ಯದೇಹಿ ತಾಂ
ಚೋಳಮಹೀಭುಜಂ ಸುದತಿ ವಿಭಾವಿಸಿ ನೋಡು ನಿಜಪ್ರರೂಢಿಯಿಂ॥

ಈತಂ ಸಿಂಹಮಹೀಪತಿ
ಯಾತಂ ಪೂರ್ವೇಷುಕಾಮಭೂಪಾಲಂ ಮ।
ತ್ತೀತಂ ನೇಪಾಳಂ ತಾ
ನೀತಂ ಸೌಭಗನೃಪಾಲನೀತಂ ಗೌಡಂ ॥ ೩೮೮ ॥

ಮಲಯಜನೃಪಾಲನೀತಂ
ಕಳಿಂಗನೀತಂ ಮತಂಗನೀತಂ ಕಾಶೀ।
ಸ್ಥಳವಲ್ಲಭನೀತಂ ಜಾಂ
ಗಲನೀತಂ ಮಾಗಧೇಶ್ವರಂ ತಾನೀತಂ ॥ ೩೮೯ ॥

ಎಲೆ ದಮಯಂತಿ ನೋಡಧಿಕಭಾಗ್ಯವನಿತ್ತುಲುದಾತ್ತಮೂರ್ತಿಯಿಂ
ನಳನೃಪರ್ಕೈವರಾದರನಳಪ್ರತಿಮರ್ ಕಡುದಣ್ಣನಾಯ್ತು ನಿ।
ನ್ನೊಲವು ಮನೋವನಂ ಬೆಳೆದು ಪಲ್ಲವಿಸಿತ್ತು ಶರೀರಕಾಂತಿಯು
ಜ್ಜ್ವಲವೆನಿಸಿತ್ತೆನುತ್ತಬಲೆ ತೋಱಿಸಿದಳ್ ನಿಜಭಾವಗರ್ಭದಿಂ ॥ ೩೯೦ ॥

ತವದಿಂ ನೋಡಕ್ಕ ನಿತ್ಯಂ ಶುಚಿಗಳಹಿತಗೋತ್ರಾರಿಗಳ್ ಧರ್ಮರಾಜರ
ಭುವನಪ್ರಸ್ತುತ್ಯರಾಶಾಭರಿತವಿಮಳಕೀರ್ತಿಪ್ರಸಿದ್ಧರ್ ನಿಜೋಷ್ಠೋ।
ದ್ಭವಪೀಯೂಷಪ್ರಿಯರ್ ಭೂಸುರಕುಲವಿಭವಖ್ಯಾತರೆಂದೈವರಂ ವಾ
ಕ್ಯವಿಶೇಷಂ ಕಯ್ಮುಗಲ್ ತೋಱಿದಳಖಿಳಕಳಾವಂತೆ ತತ್ಕಾಂತೆಗಾಗಳ್ ॥

ನೋಡು ಸಹಸ್ರದೃಷ್ಟಿಮೆಱಸೀತನನೀತನುದಾತ್ತತೇಜನಂ
ನೋಡೆಲೆ ತಂಗಿ ಭಾಳಲಿಪಿಯಂ ತೊಡೆವಗ್ಗದ ವೀರ[1]ನೀತ[1]ನಂ।
ನೋಡು ನಿತಾಂತಜೀವನಸಮೃದ್ಧಿಯೊಳಿಪ್ಪ ಮಹಾನುಭಾವನಂ
ನೋಡು ಮಗುಳ್ದು ನೋಡಧಿಕನೊರ್ವನೆ ತನ್ನೃಪನೆಂದು ತೋಱಿದಳ್
॥ ೩೯೨ ॥

ಕುವಲಯನೇತ್ರೆ ಭಾವಕಿ ಕಳಾವತಿ ಬಂದ ನೃಪಾಲರೆಲ್ಲರಂ
ವಿವರಿಸಿ ಪೇಳ್ದು ಪಂಚನಳರಂ ದಮಯಂತಿಗೆ ತೋಱಿ ಸಂತತಂ।
ಭುವನದೊಳಿಪ್ಪವರ್ ಬಹಳತೇಜಮನಾಂತು ಹರಿಪ್ರತಾಪದಿಂ
ಯುವತಿ ನಿತಾಂತಧರ್ಮಪರರಾದವರುಂಟೆಯೆನುತ್ತೆ ಮೆಚ್ಚಿದಳ್
॥ ೩೯೩ ॥

ವ॥ ಆಗಳ್,

ಮಾತಿನ ಭೇದಮಂ ಲಲಿತರೂಪವಿಭೇದವನಂಗಭೇದವಂ
ಜಾತಿಯ ಭೇದವಂ ಸಹಜಚೇಷ್ಟೆಗು ಭೇದವನಾಸ್ಯಭೇದವಂ।
ನೀತಿಯ ಭೇದವಂ ತಿಳಿವವ[2]ರ್ಗಿವರೆಂ[2]ಬವೊಲಿರ್ದರಂಗನಾ
ಪ್ರೀತಿಯಿನಂದು ಪಂಚನಳರುನ್ನತವಿಷ್ಟರದೊಳ್ ವಿಳಾಸದಿಂ ॥ ೩೯೪ ॥

ಸುಮನೋಮೂರ್ತಿಗಳಪ್ರತರ್ಕ್ಯಮಹಿಮರ್ ತೇಜಸ್ವಿಗಳ್ ದಿವ್ಯಕಾಂ
ತಿಮಯರ್ ನೋಡೆ ಮಹಾಕುಲೀನರಸಮರ್ ಲೋಕೈಕನಾಥರ್ ಪರಾ
ಕ್ರಮಿಗಳ್ ದಿಗ್ಗಜಸತ್ತ್ವಯುಕ್ತರನಿಶಂ ನಾನಾಧ್ವರಪ್ರಾಕ್ತನೋ
ತ್ತಮರಾಗಿರ್ದ ವಿದಗ್ಧ ಪಂಚನಳರಂ ತನ್ವಂಗಿ ಕಂಡಳ್ಕಿದಳ್ ॥ ೩೯೫ ॥

ಪಂಚನಳರೆನ್ನ ಮನದೊಳ್
ಪಂಚಾನಳರಾಗಿ ನಿಂದರಿವರೊಡವೆರಸಲ್ ।
ಪಂಚತ್ವದಿಂ ವಿಭೂತಿಪ
ದಂ ಚೆಲ್ವಿಕೆವಡೆಯದಿರ್ಪುದೇ ತತ್ಕ್ಷಣದೊಳ್ ॥ ೩೯೬ ॥

ವ॥ ಎಂದನಂತರಂ,

ರವಿಯೊರ್ಬಂ ಧರೆಗಲ್ಲದಿರ್ದರೊಳರೇ ಉಂಟಾದೊಡಂ ಪೆರ್ಚಿ ಮೂ
ಡುವರೇ ಮೂಡಿದರಾದೊಡದ್ಭುತವೆನಿಪ್ಪುತ್ಪಾತವೊಂದಲ್ಲದ।
ಬ್ಜವಿಕಾಸಂ ನೆಲೆಗೊಂಡು ಕೋಕಮಿಥುನಂ ಪಾರ್ಶ್ವೈಸಿರಲ್ ಮಬ್ಬು ಪಿಂ
ಗುವುದೇ ಭಾವಿಸಿ ಪೇಳ್ ಕಳಾವತಿ ಮಹತ್ಕೌಟಿಲ್ಯವೇಂ ಸತ್ಯವೇ॥ ೩೯೭ ॥

ಮಗುವೆನಿಸಿರ್ಪೆ[3]ನಿ[3]ಂದು ನಳನಲ್ಲದೆ ಮಿಕ್ಕವರೆನ್ನ ಚಿತ್ತದೊಳ್
ಬಗೆವೊಡಮೀ ಸ್ವಯಂವರಕೆ ಬಂದವರಂ ಬಯಸೀಕ್ಷಿಸಲ್ ಮನಂ।

1 ನಿವ. 2 ರ್ಗರಿವೆಂ. 3 ನೆ.

ಸೊಗಸುವೊಡಂ ಸುಗಂಧಕುಸುಮೋಜ್ಜ್ವಲಮಾಲಿಕೆ ದಿವ್ಯವೆಂದು ಮೆ
ಲ್ಲಗೆ ದಮಯಂತಿ ಪಂಚನಳರಾನನಮಂ ಪೆಱಪಿಂಗಿ ನೋಡಿದಳ್ ‖೩೯೮‖

ಉಭಯಕುಲಪ್ರಸಿದ್ಧಿಯೆನಗುಳ್ಳೊಡಮೊರ್ಮುಡಿಯುಳ್ಳೊಡಂ ಸಮಂ
ತಭಿಜನಸಂಗಮುಳ್ಳೊಡಮುದೋಷಮದುಳ್ಳೊಡಮಂಗಜಾತಸ।
ನ್ನಿಭನಳನೆನ್ನ ಕಾಂತನೆನಿಪುತ್ಸವಮುಳ್ಳೊಡವೊಲ್ಮೆಯುಳ್ಳೊಡಂ
ಶುಭತರಮೂರ್ತಿ ಪೂರ್ವನಳನಿರ್ಪುದು ಪಿಂಗುವುದನ್ಯರಾದವರ್ ‖೩೯೯‖

ತನ್ನ ಮಹಾವ್ರತಂ ಸಹಜವಾದೊಡೆ ಚಿತ್ತದೊಳನ್ಯವಸ್ತು ತಾಂ
ಮುನ್ನೆಲೆಗೊಳ್ಳದಿರ್ದೊಡೆ ನಿಜೋಕ್ತಿಗಳೊಳ್ ಪುಸಿ ಪೊರ್ದದಿರ್ದೊಡಾ।
ಸನ್ನದೊಳಿರ್ದ ಪಂಚನಳರೊಳ್ ಪಡೆದಾಂ ಮನವೊಲ್ದು ಮುನ್ನ ಕಂ
ಡೆನ್ನ ನಳಂ ನಿಜಾಕೃತಿಯೊಳಿಕ್ಕಿತರರ್ ಪೆಱಪಿಂಗುಗೀಕ್ಷಣಂ ‖ ೪೦೦ ‖

ಮನದೊಳಗನ್ಯರಂ ಬಗೆವೊಡಾಂ ನಳಭೂಪತಿಯಲ್ಲದೊರ್ವರಂ
ನೆನೆವರೆ ಬೇಱೆ ದೇವತೆಗಳುಂಟೆ[ನೆ] ಕಂಡರನಾಸೆಗೆಯ್ವೊಡೆ।
ನ್ನಿನಿಯನ ಮೂರ್ತಿ ದಿವ್ಯವದಱಿಂ ನಳನಿರ್ಕೆ ನಟರ್ ತೊಲಂಗುಗೆಂ
ದನುಪಮಮಾಲೆಯಂ ನೆಗಪಿದಳ್ [ಮಿಗೆ]ಮಿಕ್ಕ ನಳರ್ ಭಯಂಗೊಳಲ್
‖೪೦೧‖

ಎನಗಿನ್ನೇಕಿತರಪ್ರಶಂಸೆ ಶರಣಾರ್ ನೀನಲ್ಲದೆನ್ನಾಣ್ಮನಂ
ಮನದೊಳ್ ಭಾವಿಸಿ ಕಯ್ಗಳಂ ಮುಗಿದು ಪುಣ್ಯಶ್ಲೋಕನಂ ಸಂತತಂ ।
ನೆನೆಯುತ್ತಂ ದಮಯಂತಿ ಪಂಚನಳರೊಳ್ ಮಿಥ್ಯಾನಳರ್ ಪಿಂಗಿ ಪೂ
ರ್ವನಳಂ ಮತ್ಪತಿಯಕ್ಕೆನುತ್ತೆ ಭರದಿಂ ಬಂದಿಕ್ಕಿದಳ್ ಮಾಲೆಯಂ ‖೪೦೨‖

ನಿರುಪಮರಾಗದಿಂ ಕುಸುಮಮಾಲಿಕೆಯಂ ದಮಯಂತಿಯಿಕ್ಕಲಾ
ಸುರಪತಿವಹ್ನಿಕಾಲವರುಣರ್ ಸಹಜಾಕೃತಿಯಿಂದೆ ಪಿಂಗಿರಲ್।
ಪರಮಪವಿತ್ರನುತ್ತಮಚರಿತ್ರನಶೇಷಗುಣಾನ್ವಿತಂ ನಳಂ
ಧರಿಸಿ ನಿಜಸ್ವರೂಪದಿನದೇನೆಸೆದಿರ್ದನೊ ಸೌಮ್ಯಸಂಪದಂ ‖ ೪೦೩ ‖

ವ‖ ಆಗಳ್,

ಭಂಗುರಮಿಥ್ಯಾಜ್ಞಾನಂ
ಪಿಂಗಲೊಡಂ ಹೃದಯದಮಳಸಮ್ಯಗ್ಜ್ಞಾನಂ।
ಕಂಗೊಳಿಸುವಂತಿರಿರ್ದಂ
ಮಂಗಳಕರಮೂರ್ತಿ ವೀರನಳಭೂಪಾಲಂ ‖ ೪೦೪ ‖

ಪ್ರತಿಸೂರ್ಯ್ಯಂಪಿಂಗಿದಾದಿತ್ಯನೊ ಘನತಿಮಿರಂಪಿಂಗಿದೊಂದಿಂದುವೋ ಚಿ
ತ್ತ್ತತಮಂಪಿಂಗಿರ್ದ ದಿವ್ಯಾತ್ಮನೊ ತಿಳಿವೊಡಸಾಧ್ಯಂ ದಲೆಂಬಂತೆ ದೇಹ।
ದ್ಯುತಿ ನೀಳ್ದಾಚ್ಛಾದಿಸಲ್ ಭೂಪನ ತನುವನಳಂಕಾರಸರ್ವಸ್ವಶೋಭಾ
ನ್ವಿತನಾಗಿರ್ದ್ದಂ ನಳಂ ಕಂಠದೊಳೆಸೆದಿರೆ ಪೂಮಾಲೆ ಸಲ್ಲೀಲೆಯಿಂದಂ
॥ ೪೦೫ ॥

ಮನಸಿಜಮೂರ್ತಿ ನಿನ್ನ ಕೃಪೆಯಿಲ್ಲದ ದೂಸಱಿನೀಯರ[1]ಲ್ಗಳಂ[1]
ಬಿನ ತೆಱದಿಂ ಮದೀಯತನುವಂ ಕೊಱಚಾಡಿದವೆಂದವಂ[ದಲಂ]।
ಗನೆ ಮಿಗೆ ಕಟ್ಟಿಯೊಪ್ಪಿಸಿದಳೆಂಬಿನವೊಪ್ಪುವ ಪುಷ್ಪಮಾಲೆಯಂ
ಜನಪತಿಯೊಪ್ಪುಗೊಂಡು ಸೊಬಗಂ ತಳೆದಂ ಮುಳಿಯಲ್ ನೃಪಾಲಕರ್
॥ ೪೦೬ ॥

ವ॥ ಆಗಳ್,

ನಿನ್ನ ಪತಿವ್ರತಾಗುಣಮನಾರ್ ಕೆಡಿಸಲ್ ಬಗೆದಿರ್ದ್ದೊಡಾಕ್ಷಣಂ
ನಿನ್ನಯ ಕೋಪವಹ್ನಿಯಿನವರ್ ಮಿಗೆ ಭಸ್ಮವನೆಯ್ದುಗೆಂದು ಸಾ।
ಖ್ಯೋನ್ನತಚಿತ್ತದಿಂ ವರವನಿತ್ತು ದಿಶಾಧಿಪರಂಬರಕ್ಕೆ ಬೇ
ಗಂ ನಡೆದರ್ ಬಟಿಕ್ಕ ಬಲೆಗಾಯ್ತು ನಳಪ್ರತಿಪತ್ತಿಯುತ್ಸವಂ ॥೪೦೭॥

ಅನಿಮಿಷಪತಿವೊದಲಾದವ
ರನುತಾಪದಿನಂದು ಬಂದಬಟ್ಟೆಯನೆಯ್ದಲ್।
ಜನಪತಿಗಳಿತ್ತ ಪೋಳೆಂ (?)
ದೆನುತೆರ್ದ್ದರ್ ಕೈದುಗೊಂಡು ಲಜ್ಜಾಹತಿಯಿಂ ॥೪೦೮॥

ವ॥ ಅಂತೆರ್ದ್ದು,

ಅಱಿಯರನಾಡಿ ನಮ್ಮನಿಬರಂ ದಮಯಂತಿ ಸಮಂತು ಮಿಕ್ಕರಂ
ಗಣಿಸದೆ ಕೂರ್ಮ್ಮೆಯಿಂ ವರಿಸಿ ಮಾಲೆಯನಿಕ್ಕಿದಳಾಸೆವಟ್ಟು ಪ।
ಲ್ಲಣಿಸು ಹಯಂಗಳಂ ಬರಿಸು ಸೇನೆಯನೆಂದು ಸಮಸ್ತಭೂಪರಾ
ಕ್ಷಣದೊಳಿದಿರ್ಚ್ಚಲೆಂದು ಬಗೆದಂದವರಂ ಮಿಗೆ ಸುತ್ತಿ ಮುತ್ತಿದರ್॥

ಎಮ್ಮಯ ಲಜ್ಜೆವೋಸರಿಸಲೀ ದಮಯಂತಿಯನೊಯ್ವ ಗಂಡನಾ
ವಂ ಮದನಾರಿಯೋ ದನುಜವೈರಿಯೊ ಮಿಕ್ಕವರೆಂತು ಪೋಗಲ।
ಕ್ಕುಂ ಮದದಂತಿಯಿಂ ತುಟಿಸಿದಲ್ಲದೆ ಮಾಣ್ಬೆವೆನುತ್ತ ಭೂಪರಾ
ರ್ಪಿಂ ಮಿಗೆ ಕೋಪದಿಂ ಮುಳಿದು ಮುತ್ತಿದರಾರ್ದ್ದು ನಳಕ್ಷಿತೀಶನಂ॥

ವರಿಸದ ಕಾಂತೆಯಂ ವರಿಸಿಕೊಂಡ ಮನಃಪ್ರಿಯನಂ ನಿಜಸ್ವಯಂ
ವರಸದನಕ್ಕೆ ಸೀಳ್ದು ಪೊಸತೋರಣಮಂ ಸಮಕಟ್ಟಿ ಪೋಪೆವೆಂ।

1 ಳ್ಗಳೆಂ.

ದರಸುಗಳೆಲ್ಲರುಂ ನಳನೃಪಾಲಕನಂ ತವೆ ಮುತ್ತಲುಗ್ರಕೇ
ಸರಿ ಕರಿಮಧ್ಯದೊಳ್ ನೆಲಸಿದಂದದಿನಿರ್ದನಿಳಾಧಿನಾಯಕಂ ॥೪೧೧॥

ಉರದೊಳ್ ಕೌಸ್ತುಭರತ್ನಮಂ ಮುರಹರಂ ತಾಳ್ದಂದದಿಂ[ದೀನೃಪರ್]
ಧರಿಸಲ್ ಪ್ರಾಪ್ತವೆ ಕಾಂತಿವೆತ್ತ ದಮಯಂತೀರತ್ನಮಂ ವಕ್ಷದೊಳ್।
ಧರಿಸಲ್ ತನ್ನಿಷಧೇಶನಲ್ಲದಿತರರ್ ತಾಳ್ವಂದು ಸಾಮಾನ್ಯಕುಂ
ಜರವಾಶಾಗಜದಂದದಿಂ ಧರಿಸವೇ [ಪೆಂ]ಪಿಂ ಧರಾಭಾರಮಂ ॥೪೧೨॥

ವ॥ ಎಂದು ಸಕಲಜನವಾದಂ ನೆಗಟೆ,

ಯುವರಾಜಪ್ರಭುಪಟ್ಟದೊಳ್ ನಳನೃಪಂ ಭೂಪಾಲರಂ ಗೆಲ್ದು ಶೌ
ರ್ಯವಿದಂ ದಿಗ್ವಿಜಯಪ್ರಸಿದ್ಧಿಗೆ ಜಯಸ್ತಂಭಂಗಳಂ [1]ನಟ್ಟ[1] ಸ।
ತ್ತ್ವವನಂ[ದಂತ]ಱಿದಿರ್ದುಮಿಂದು ತೊಡೆಯಲ್ ಬಂದಿರ್ದರಂ ಕೊಂದುಕೂ
ಗುವನೆಂದಲ್ಲಿ ಕೆಲಂಬರೋಸರಿಸಿದರ್ ಮತ್ತಿರ್ದವರ್ ಮುತ್ತಿದರ್॥೪೧೩॥

ಸಿಂಗದ ಕಯ್ಯ ಮತ್ತಗಜಮೌಕ್ತಿಕವಂ ಸೆಳೆತಪ್ಪೆನೆಂಬ ಮೂ
ರ್ಖಂಗೆಣೆಯಾಗಿ ಭೂಪರರೆಬರ್ ಮುಳಿದೆಯ್ತರೆ ಕಂಡು ನೈಷಧಂ।
ಸಂಗರಧೈರ್ಯಮೂರ್ತಿಯವರಂ ಬಗೆಗೊಳ್ಳದೆ ಪೇರುಮಧ್ಯದು
ತ್ತುಂಗಮೃಗಾರಿಯಂತೆ ನೆಲಸಿರ್ದನತಿಪ್ರಬಲಪ್ರತಾಪದಿಂ ॥೪೧೪॥

ಬಿಡು ಬಿಡು ನೈಷಧೇಂದ್ರ ದಮಯಂತಿಯನಲ್ಲದೊಡಿಲ್ಲ ಕೊಂಡುಪೋ
ದೊಡೆ ನಿಜಸತ್ತ್ವವಂ ತಿಳಿಯಲಪ್ಪುದೆನುತ್ತರೆಬರ್ ಮಹೀಭುಜರ್।
ಕಡುಮುಳಿದಾರ್ದು ಕೋಲ್ಮಳೆಯನಿರ್ದೆಸೆಯೊಳ್ ಸುರಿಯಲ್ ಕೆರಳ್ದು ಬೊ
ಬ್ಬಿಡುತದರಟ್ಟಿದಂ ನಳನೃಪಾಲಕನುಗ್ರಲಯಾಗ್ನಿಯಂದದಿಂ ॥೪೧೫॥

ಎಸುವಿಡಿವಟ್ಟಿಪೊಯ್ವ ತಿವಿವೌಂಕುವ ನೂಕುವ ಬೊಬ್ಬೆಗೊಟ್ಟುಚೋ
ದಿಸುವ ಪೊಡವಡ್ಡದೋರ್ಪ ಪೆಱಪಿಂಗುವ ಮುಂಗುಡಿಗೆಯ್ದಿಬಯ್ದುಝುಂ।
ಕಿಸುವ ಸಡಿಲ್ವ ಮೆಯ್ದೆಗೆವ ಗಾಯವನೊಡ್ಡುವ ಸೇದವೆತ್ತು ಝೊಂ
ಪಿಸುವ ಕನಲ್ದು ಕಯ್ಮಱೆವ ಸಂಕುಳಯುದ್ಧವತೀವಭೀಕರಂ ॥೪೧೬॥

ಖರ್ವಮತಿಪ್ರಸಿದ್ಧನಿವನಲ್ಲದೆ ತನ್ನ ಸುತಾಸ್ವಯಂವರ
ಕ್ಕುರ್ವಿಯ ಭೂಪರಂ ಕರೆಸಿ ಲಜ್ಜೆಯನಿಕ್ಕಿ ಕಳೆಗೊಂಡನೀತನೊಳ್।
ಸರ್ವಗವಾರ್ತೆಯಂ ಪುಸುಗೆಗೊಂಡಪೆವೆಂದರೆಬರ್ ಮಹೀಭುಜರ್
ದೋರ್ವಲದಿಂದ ಭೀಮನೃಪನಾಲಯಮಂ ಕಡುಕೆಯ್ದು ಮುತ್ತಿದರ್॥

1 ನಟ್ಟು.

ವ॥ ಅಂತು ಮುತ್ತೆ,

ಘನತರಸೇನೆಯಂ ನಿಜಭುಜಾಬಲದಿಂ ಸಹಜಪ್ರತಾಪದಿಂ
ಮನದನುರಾಗದಿಂ ನಿಷಧಭೂಪತಿ ಯುದ್ಧದೊಳಾಂತು ವೈರಿವಾ ।
ಹಿನಿಗಿದಿರಾಂತು ತೋಳ್ವಲವನೊಂದಿನಿಸಂ ಸವಿದೋಱಲಾಕ್ಷಣಂ
ಘನಘಟೆ ಗಾಳಿಯಿಂ ಪರೆವವೊಲ್ ಪರೆದತ್ತು ವಿರೋಧಿಸಂಕುಳಂ ॥೪೧೮॥

ವ॥ ಅನಂತರಂ,

ಪುಸಿಯಂ ಸತ್ಯವಧರ್ಮವಂ ಸಹಜಧರ್ಮಂ[1] ಕೋ[1]ಪವಂ ಶಾಂತಿ ಸಾ
ಹಸಮಂ ಬುದ್ಧಿ[2]ಯು[2]ಮಂತ್ರವಂ ಶ್ರುತಿಯನಾಚಾರಂಗಳಂ ಸತ್ಕುಲಂ।
ಪಿಸುಣಂ ಸ್ವೈರಣಿ ಗೆಲ್ವವೊಲ್ ಖಳನೃಪಾಲಶ್ರೇಣಿಯಂ ಗೆಲ್ದನ
ರ್ಕಸಮಂ ನೈಷಧಚಕ್ರವರ್ತಿ ಸತತಂ ಸತ್ಕೀರ್ತಿಕಾಂತಾಧಿಪಂ ॥೪೧೯॥

ಜನಪತಿನೈಷಧಂ ರಿಪುನೃಪವ್ರಜಮಂ ಕಡುಕೆಯ್ದು ಬೆಂಕೊಳಲ್
ಮನದಟಲಿಂದವರ್ ಘನತರವ್ಯಥೆಯಿಂ ದಮಯಂತಿಕಾಂತೆ ಕೇಳ್ ।
ನಿನಗೆ ಸಪತ್ನಿಯಕ್ಕೆ ವಿಜಯಾಂಗನೆಯೆಂದುಱೆ ಕೋಪಿಸುತ್ತೆ ಭೋಂ
ಕೆನೆ ಪರೆದರ್ ಗಜಾಶ್ವತತಿಯಿಲ್ಲದೆ [ಬೇಗನೆ] ಬಂದಬಟ್ಟೆಯೊಳ್ ॥೪೨೦॥

ಲಲನಾಸ್ನೇಹರಸಪ್ರವೃತ್ತಿಭುವನಸ್ತೋತ್ರೈಕಪಾತ್ರಂ ಸಮು
ಜ್ಜ್ವಲದೋರ್ದಂಡಬಲಾನ್ವಿತಂ ರಿಪುಹರಂ ತೇಜಸ್ವಿಯಾಗಿರ್ದ ತ ।
ನ್ನಳದೀಪಕ್ಕೆ ವಿಪಕ್ಷವಂ ತಳೆದು ಬಂದುರ್ವೀಶ್ವರರ್ ಶೀಘ್ರದಿಂ
ಶಲಭಪ್ರಾಪ್ತಿಯನೆಯ್ದಿದರ್ ಪಲಬರಿರ್ದರ್ ಭೀತಿಯಿಂದೋಡಿದರ್ ॥

ಶರದಮಳೇಂದು ರೋಹಿಣಿ ನಭೋಂಗಣದೊಳ್ ಮೆಱೆವಂತೆ ಪಲ್ಲವಾ
ಧರೆ ದಮಯಂತಿಯುಂ ನಳನೃಪಾಲಕನುಂ ತನುಕಾಂತಿಯಿಂ ಸ್ವಯಂ ।
ವರಗೃಹದಲ್ಲಿರಲ್ ಪಡೆದು ಭೀಮನೃಪಂ ನಡೆತಂದು ತದ್ವಧೂ
ವರರನತೀವಮಂಗಳಮಹೋತ್ಸವದಿಂ ಬಿಗಿಯಪ್ಪಿ ಪೆರ್ಚಿದಂ ॥೪೨೨॥

ವ॥ ಆಗಳ್,

ಕಳಕಳಸಂಭ್ರಮಂ ನೆಲಸಿ ಭೀಮನೃಪಾಲನನಂತಬಂಧುಸಂ
ಕುಳವಖಿಳಾಪ್ತರಾತ್ಮಸಚಿವರ್ ಪರನಾರಿಯರುತ್ತಮದ್ವಿಜಾ ।
ವಳಿ ನಲಿದತ್ತಲಿತ್ತಲೆಡೆಯಾಡಿ ಸಮಂತು ವಿವಾಹಗೇಹಮಂ
ಗಳ [ಕರ]ವಾದ ಪೆರ್ಗಲಸದುಜ್ಜುಗವಂ ತಳೆದಿರ್ದುದಾವಗಂ ॥೪೨೩॥

1 ಯೊ. 2 ಯು.

ಹಸೆಗಳನಿಕ್ಕು ಮಜ್ಜನದ ಮಂದಿರದೊಳ್ ಪೊಸಗಂಧತೈಲವಂ
ಸಸಿಮುಖಿಯರ್ಕಳಿಂ ತರಿಸು ಮಂಗಳವಾದ್ಯವನೇಟ್ಗೆಯಿಂದ ಬಾ ।
ಜಿಸು ನವರತ್ನದಾರತಿಗಳಂ ಸಮಕಟ್ಟು ಪುರೋಹಿತರ್ ವಿಲಂ
ಬಿಸಲೆಡೆಯುಂಟೆ ಕೂಡಿ ಮಧುಪರ್ಕವನೆಂಬವರೆಲ್ಲಿ ನೋಡ್ಪೊಡಂ ॥೪೨೪॥

ನನೆಗಳ ತೊಂಡಲಂ ಮಿಸುಪ ಬಾಸಿಗವಂ ತರಿಸುಜ್ಜ್ವಲಪ್ರಸಾ
ಧನವನಳಂಕೆಗೆಯ್ದತಿಳವಸ್ತ್ರಯುಗಂ ಬಿಡಿಲ ಶುಭ್ರಲಾಜೆಯಂ ।
ವನಿತೆಯರಾಯ್ದು ತಂದಿರಿಸಿ ನುಣ್ದನಿಯಂ ಧವಳಾಖ್ಯವಂ ಸುವಾ
ಸಿನಿಯರೊಳಿಲ್ದು ಪಾಡಿಯೆನುತಿರ್ಪ ರವಂ ಪರೆದಿರ್ದುದೆಲ್ಲಿಯುಂ॥೪೨೫॥

ಕರಸರಸೀರುಹಕ್ಕೆ ನರನಾಥನ ವೇಣಿಯ ದಿವ್ಯಗಂಧವಂ
ಪೊರೆದಪವೆಂಬ ತಮ್ಮ ಮನದುತ್ಸವಮೊಪ್ಪುವಿನಂ ಸರೋಜವಂ ।
ಕರಜದಿನೊಯ್ಯನೊಯ್ಯನೆ ಬಿದಿರ್ಚಿ ಕದಂಬಸುಗಂಧತೈಲವಂ
ತರುಣಿಯರೊಲ್ದು ಪೂಸಿದರಿಳೇಶನ ಮೌಳಿಗೆ ಲೋಲನೇತ್ರೆಯರ್॥೪೨೬॥

ವ॥ ಬಳಿಯಿಂ,

ಬಾಲಕಿಯರ್ [ಸು]ವರ್ಣಕಳಶಂಗಳ ನಿರ್ಮಳವಾರಿಯಂ ಮಹೀ
ಪಾಲನ ಮೌಳಿಯೊಳ್ ಪಸರಿಸಲ್ ಜಲಧಾರೆಗಳಿಕ್ಕೆಲಂಗಳಿಂ ।
ಸಾಲಿಡಲುರ್ವಿಯೊಳ್ ಮೆಟೆದುದುಜ್ಜ್ವಲಮಜ್ಜನಶೋಭೆ ಸಂತತಂ
ನೀಲಬಳಾಹಕಂ ವಿಮಳವಾರಿಯನಾಂತಿಳೆಗೀವ ಮಾಟ್ಕೆಯಿಂ ॥೪೨೭॥

ಆ ಕ್ರಮದಿಂ ದಮಯಂತಿಯ
ವಕ್ರಶಿರೋಜಕ್ಕೆ ತೈಲವಂ[1]ಸಿಂ[1]ಪಿಸಿದರ್ ।
ಶಕ್ರಸ್ತ್ರೀಸನ್ನಿಭೆಯರ್
ಚಕ್ರಯುಗಸ್ತನೆಯರಮಳಕಮಳಾನನೆಯರ್ ॥೪೨೮॥

ಆ ವಿಧದಿಂ ದಮಯಂತಿಯು
ಭಾವಕಿಯರ್ ವಿಮಳಮಜ್ಜನಂಬುಗಿಸಿದರಾ ।
ಶಾವಿವರ[2]ಮನೆಯ್ದ[2]ಲ್ ನಾ
ನಾವಾದ್ಯಂ ಸಕಳಬಂಧುಜನಸಂವೇದ್ಯಂ ॥೪೨೯॥

ತದನಂತರಮವರಿರ್ಬರ್
ಮೃದುವಸ್ತ್ರಾಭರಣಮಾಲಿಕಾಲೇಪನಸಂ ।

1 ನುಂ. 2 ವಗೆಯ್ತು.

ಪದದಿಂದುದ್ವಾಹನಿವಾ
ಸದ ಪಸೆಗೆಯ್ತಂದು ಕುಳ್ಳಿದರ್ ನಲವಿಂದಂ ॥೪೩೦॥

ಮಧುರೋಕ್ತಿಯಿಂದ ಭೂಪಂ
ಮಧುಪರ್ಕವನೆಸಗಲಖಿಳವಾದ್ಯಂ ದುಗ್ಧಾಂ ।
ಬುಧಿಘೋಷದಂತೆ ಪೊಣ್ಮಲ್
ವಿಧುಮುಖಿಯಂ ಧಾರೆಯೆಱೆಯಲುದ್ಯತನಾದಂ ॥೪೩೧॥

ಆ ವಿಜಯೋತ್ಸವಂ ಶುಭಮುಹೂರ್ತವೆನಲ್ ದಮಯಂತಿಯಂ[ಕರಂ]
ಭೂವರನೈಷಧಂಗೆ ಗುಣಿ ಭೀಮನೃಪಂ ಜಲಧಾರೆಯಂ ತುರಂ ।
ಗಾವಳಿವಾರಣೌಘಸಹಿತಂ ಮನವೊಲ್ದೆಱೆದಂ ನಿಜಾನ್ವಯಂ
ಭಾವಿಸಿ ಬಣ್ಣಿಸಲ್ ವಿವಿಧಮಂಗಳವಾದ್ಯವಿಶೇಷಘೋಷದಿಂ ॥೪೩೨॥

ಪೊಸತೆನೆ ವಿ[ವಾ]ಹಹೋಮವ
ನೆಸಗಿ ಬಟಿಕ್ಕಮರ್ದ ಸಪ್ತಪದಿಯಂ ಮೆಟ್ಟಲ್ ।
ಪಸರಿಸಿರೆ ಮಂತ್ರತತಿ ಷ
ಡ್ರಸಭೋಜನದೆಸೆವ ಬೂವದೆಡೆಯಾಯ್ತಾಗಳ್ ॥೪೩೩॥

ಮಣಿಮಯದೀಪವುಜ್ಜ್ವಲಿಸಿ ರನ್ನದ ಕೇವಣದೇಶ್ಗೆಯೊಪ್ಪುವ
ಡ್ಡಣಿಗೆಯೊಳಿಟ್ಟು ಹೊನ್ನ ಹರಿಯಾಣವನೋರಣವಾಗಿ ಬಟ್ಟಲಂ ।
ಗಣನೆಗಳಿಲ್ಲದಿಟ್ಟೆಡದ ಮಿಂಚುವ ಗಿಂಡಿಗಳೊಪ್ಪೆ ಚೆನ್ನಬಿ
ಜ್ಜಣಿಗೆ ಕರಂ ಮನಂಗೊಳಿಸಲಿಂತೆಡೆಯಾದುದು ಬೂವದೂಟದೊಳ್ ॥

ಮುದದಿಂ ಕೂರ್ತೊಡವಂದ ನಿಬ್ಬಣಿಗರಂ ಸಂಗೀತಸಾಹಿತ್ಯಕೋ
ವಿದರಂ ಬಂಧುಗಳಾದ ಭೂಪತಿಗಳಂ ವಿದ್ವಜ್ಜನಶ್ರೇಣಿಯಂ ।
ಮೃದುಪೀಠಂಗಳನಿಕ್ಕಿ ರಾಜಕುಲವೃದ್ಧಾದಿಕ್ರಮಂ ರಂಜಿಸಲ್
ಪದಪಿಂ ಪಂಕ್ತಿಗಳಾಗಿ ಕುಳ್ಳಿರಿಸಿದರ್ ವಾಕ್ಯೋಪಚಾರಂಗಳಿಂ ॥೪೩೫॥

ಒಡನೂಟಕ್ಕವನೀಶ್ವರಂ ಕರೆವಿನಂ ಸಲ್ಲಜ್ಜೆಯಿಂ ಕಾಂತೆ ಮೆ
ಲ್ಲಡಿಯಂ ಪಿಂದಿಡುತಂ ಮೊಗಗುಳ್ಳಗೆ ಮಿಗಲ್ ಕಂಡಾಳಿಯರ್ ಸೋಂಕಿ ಕೈ ।
ವಿಡಿದೊಲ್ದೊಯ್ಯನೆ ತಂದು ಕುಳ್ಳಿರಿಸಿ ನಾನಾಭಕ್ಷ್ಯಭೋಜ್ಯಂಗಳಂ
ಕಡುಪೆರ್ಚಿಂ ಬಡಿಸಲ್ಕದೇಂ ಮೆಱೆದುದೋ ಬೂವಂ ಪ್ರಮೋದಾವಹಂ
॥೪೩೬॥

ಅಳಕಂ ನೀಳಬಳಾಹಕಂ ಘನರವಂ ಸತ್ಕಿಂಕಣೀ ಸಿಂಜಿನೀ
ವಳಯಧ್ವಾನಮನೇಕಭೂಷಣಮ[ಣಿ]ಜ್ಯೋತ್ಸ್ನಾಳಿ ಗೋತ್ರಾರಿಚಾ ।
ಪಳಚಾಪಂ ತವುಗೆಂಬಿನಂ ಸಹಜಲಾವಣ್ಯಾಮೃತಾಸಾರಮಂ
ಲಲನಾಸಂತತಿ ಸಾಲಿಡಲ್ ಸೊಗಸದೇ ಬೂವಂ ಜಗತ್ಪಾವನಂ ॥೪೩೭॥

ಅಧರಸುಧಾರಸಂ ಕುಶಲಹಸ್ತಸುಧಾರಸವಿಂಪುವೆತ್ತ ವಾ
ಕ್ಸುಧೆಯ ರಸಂ ಕಟಾಕ್ಷಸಿತಕಾಂತಿಸುಧಾರಸವಾತ್ತ ಯೌವನಾಂ ।
ಬುಧಿಯ ಸುಧಾರಸಂ ಕರಜದೀಪ್ತಿಸುಧಾರಸವೊಪ್ಪಲೊಪ್ಪಿದರ್
ವಿಧುವಮುಖಿಯರ್ ನಿಜಾವಯವಷಡ್ರಸವಂ ಸವಿದೋರ್ಪ ಮಾಡ್ಕೆಯಿಂ॥

ವಳಯಂಗಳ್ ಸೂಡಗಂ ಕಂಕಣತತಿ ನಿಗಳಂ ಹಸ್ತಸೂತ್ರಂ ಲಸತ್ಕೋ
ಮಳಲಾಕ್ಷಾರಕ್ತರಾಗಂ ನವಮಣಿಮಯನೂತ್ನಾಂಗುಲೀಯಂ ಕರಂ ಕಂ।
ಗೊಳಿಸಿರ್ಪಾವೋದಹಸ್ತಾಬ್ಜದಿನನುಪಮ ನಾನಾಪದಾರ್ಥಂ ಪ್ರಸಿದ್ಧಂ
ಗಳನೊಯ್ಯಾರಂಗಳಿಂದಂ ಬಡಿಸಿದರರೆಬರ್ ಕಾಂತೆಯರ್ ಪಂಕ್ತಿಗಾಗಳ್॥
॥೪೩೯॥

ನೇವುರದ ರವಂ ಕಾಂಚಿಗೆ
ಕೇವಣಿಸಿದ ಕಿಂಕಿಣೀರವಂ ಮಣಿಮಯರು ।
ಕ್ಪೀವರಕೇಯೂರರವಂ
ತೀವಿರಲೆಡೆಯಾಡಿ ಬಡಿಸಿದರ್ ಕೋಮಳೆಯರ್ ॥೪೪೦॥

ಪರಡಿ ಕಿಱುಗೋದಿಸೇವಗೆ
ಸರವಳಿಗೆ ಸುಗಂಧಕಟವೆಯಕ್ಕಿಯ ಪಾಕಂ ।
ಪರಿವಡೆಯಲಣ್ಣೆವಾಲಿಂ
ಬೆರಸಿದ ಸಕ್ಕರೆಯ ತುಯ್ಯಲಿಕ್ಕಿದರರೆಬರ್ ॥೪೪೧॥

ರಸವದ್ಗೋಧೂಮದಿಂ ಪಾವನತರ ಯವೆಯಿಂ ಮಾಷದಿಂ ಮುದ್ಗದಿಂದಂ
ಪೊಸಕಂಗಿಂ ಶಾಲಿಯಿಂದಾಢಕಿಯಿನಮಲನಿಷ್ಪಾವದಿಂ ರಂಜಿಸಲ್ ಭ ।
ಕ್ಷ್ಯಸಹಸ್ರಂ ಶರ್ಕರಾಮಿಶ್ರಣದಿನರೆಬರಬ್ಜಾಸ್ಯೆಯರ್ ಬಡ್ಡಿಸಲ್ ಕಂ
ಗೆಸೆದತ್ತು ದ್ವ್ಯಾಹಸದ್ಭೋಜನವನುಪಮಪಂಚೇಂದ್ರಿಯಪ್ರೀತಿಯಾಗಲ್
॥೪೪೨॥

ಕಪ್ಪುರನಾಳೀಗಳಸಂ
ತುಪ್ಪದ ಹೂರಿಗೆ ಬುರುಂಡೆ ಜಾಕಾಯ್ನುಱುಗಂ।
ಪೊಪ್ಪುವ ಮೋರುಂಡೆ ಮನ
ಕ್ಕೊಪ್ಪಿಸಿದುವು ಮಧುರರಸದ ಸುಧೆಯಂ ಬುಧರೊಳ್
॥೪೪೩॥

ಪಲರಱಿಕೆಯ [1]ಭಕ್ಷ್ಯಗಳಂ
ಪಲವು[1] ಕಾಯಿಮಾಧುರಂಗಳಂ ಪಲವಂ ನು ।
ಣ್ಮೆಲೆವಾ ದುರವಂ........(?)
ಲಲಿತಾಂಗಿಯರೊಲ್ದು ಬಡಿಸಿದರ್ ಪಂಕ್ತಿಗಳಂ ॥೪೪೪॥

ನಳ ಮತವಂ ಪ್ರಕಟಿಸಿದಂ
ಸಲಿಲಂ ಶಿಖಿಯಿಲ್ಲದಮೃತಪಾಕವನಾಗಳ್ ।
ನಳನೃಪತಿ ಭಕ್ಷ್ಯಭೋಜ್ಯಾ
ವಳಿಯಿಂ[ದೆ] ನಿಬ್ಬಣಭೂಭುಜರ್ ಬೆಱಗಾಗಲ್ ॥೪೪೫॥

ಪರಿಪರಿಯ ಪಲವು ಕಾಯ್ ಮಾ
ದುರವಂ ಶಿಖಿಯುದಕವಿಲ್ಲದೊಬ್ಬಳ ಕಯ್ಯಿಂ ।
ವಿರಚಿಸಿದಂ ನಳಪಾಕವ
ನರಸುಗಳಚ್ಚರಿಯೆನಲ್ ನಳಕ್ಷಿತಿನಾಥಂ ॥೪೪೬॥

ಸಾಸವೆ ಶಿಖರಿಣಿ ಪಳಹಂ
ಕೀಸಿದ ಹುಳಿಯಲ್ಲವೊಗ್ಗಿನುಪ್ಪಿನಕಾಯ್ಗಳ್ ।
ಬೇಸಿದಕುಡಿನಿರ್ಪಾನಂ (?)
ವಾಸವಭೋಗವನದಿರ್ಪದಿರ್ಪವೆ ಸತತಂ ॥೪೪೭॥

ತಿಳಿದುಪ್ಪದೊಳಳಕಂಗಳ್
ಪೊಳೆಯಲ್ ಕಪ್ಪಿಲ್ಲಿ ಬಿರ್ದುದೆಂದಾಗಳ್ ಕೋ ।
ಮಳೆಯರ್ ಶೋಧಿಸಿ ಶೋಧಿಸಿ
ಬಟಲ್ವರತಿಮುಗ್ಧೆಯರ್ ವಿದಗ್ಧರ ಕೆಲದೊಳ್ ॥೪೪೮॥

ಜೂಳೆಯುದ ಮುತ್ತು ಪಱಿದು ನೃ
ಪಾಲಕನಗಲೊಳಗೆ ಪರೆಯಲಾಯಲ್ಬಗೆದಂ ।
ದಾ ಲಲನೆ ಕಟವೆಯೋಗರ
ದೋಳಿಯ ಮುತ್ತುಗಳ ಭೇದವಱಿಯದೆ ನಿಂದಳ್ ॥೪೪೯॥

ಮಿಗೆ ತಿಳಿದುಪ್ಪವಂ ಪನಿಯ ಪಾನವನಿರ್ಕೆಲವಟ್ಟಲಲ್ಲಿ ತಂ
ದಗಲಿಡಲಲ್ಲಿ ಭೇದದಱಿವಿಲ್ಲದೆ ಸುಮ್ಮನಿರಲ್ಕೆ ತುಪ್ಪವೇಂ ।
ಸೊಗಸದೆ ಪೇಟೆನಲ್ ನಿಜಮುಖಂ ಪ್ರತಿಬಿಂಬಿಸಲಿಟ್ಟ ತುಪ್ಪವೇಂ
ಸೊಗಸದೆ ಸದ್ವಿಜರ್ಗೆಬಲೆಯೆಂದನದೊರ್ವ ವಿದಗ್ಧಭೂಭುಜಂ ॥೪೫೦॥

1 ಭಕ್ಷಂಗಳ್ಪಲವಂ.

ಬಡಿಸಲ್ಬಂದೆಡೆಯಾಡುವಂಗನೆಯುರಂಗಚ್ಛಾಯೆಗಳ್ ತುಪ್ಪದಿಂ
ಗಡಲೊಳ್ ಪಾನರಸಂಗಳೊಳ್ ಸಕಲಭೂಷಾರತ್ನದೊಳ್ ನಿಂದವೊಲ್ ।
ಗಡಣಂಗೊಂಡು ಮಗುಟ್ದು ಪೋಗಲೆಸೆಗುಂ ಭೂಪಾಲರೊಳ್ಕೂರ್ಮೆಯಿಂ
ದೊಡನೂಟಂಬಡೆದಿರ್ದು ಪೋಪ ಸುದತೀಸಂದೋಹಮೆಂಬಂದದಿಂ
॥೪೫೧॥

ಚಾಪಳವೃತ್ತಿಯಂ ಮೆಱೆವ ತಾಣವಿದಲ್ತೆಮಗೆಂದು ಮಾನ್ಯಧಾ
ತ್ರೀಪತಿಗಳ್ ಕೆಲರ್ ನೆಲನನಪ್ಪುವವೊಲ್ ತಲೆವಾಗಿ[1]ದರ್[1] ವಧೂ ।
ನೂಪುರರತ್ನದೊಳ್ ಪೊಳೆಯೆ ತಮ್ಮ ಮನೋಹರಮೂರ್ತಿಗಳ್ ಪಿಕಾ
ಳಾಪೆಯರಂಘ್ರಿಗಳ್ಗೆಱಗಿ ಬೇಟ್ಪ ಸುಖಂಬಡೆವಂಗಭಂಗಿಯಿಂ ॥೪೫೨॥

ನಡುವಂ ಕಾಂಚಿಯೊಳಾಂತು ರೂಪವತಿಯರ್ ನಾನಾಪದಾರ್ಥಂಗಳಂ
ಬಡಿಸಲ್ಬಾಗಿರಲುನ್ನತಸ್ತನಯುಗಂ ಸ[ಂ]ವ್ಯಾನಮಂ ನೂಂಕೆ ಮೆ ।
ಯ್ದೊಡವಂ ಹಾರವನಂಗಕಾಂತಿಯುನಿತಂ ಪುಣ್ಯಾಧಿಕರ್ ಕಂಡು ಕ
ಣ್ಣಿಡುವರ್ ಭೋಜನವಂ ಬಿಸುಟ್ಟು ಪಸಿವಿಲ್ಲೆಂಬರ್ ಸಮೀಪಸ್ಥರೊಳ್
॥೪೫೩॥

ಬಡಿಸುವ ಗಾಡಿಕಾರ್ತಿಯರ ವಕ್ತ್ರವನೀಕ್ಷಿಸಲಾಸೆವೆಟ್ಟು ನೀ
ರಡಸದೆಯುಂ ಸುಗಂಧಜಲವಿಲ್ಲದಿರಲ್ ಬಱಿಗಿಂಡಿಯುಂ ಸಮಂ ।
ತಡಿಗಡಿಗೆತ್ತಿ ನೀರ್ಗುಡಿವ ಬಲ್ಮೆವದಿಂ ಮೊಗವೆತ್ತಿಯೆತ್ತಿ ಕ
ಯ್ನಿಡುವರತೀವಕಾಮುಕರಭೇದ್ಯವೆನಲ್ ನಿಜಚೇಷ್ಟೆ ದೃಷ್ಟಿಯೊಳ್
॥೪೫೪॥

ಬಡಿಸಿದರೇನನಾವೆಡೆಯೊಳಾವುದನಿಕ್ಕಿದರಾವುದೋಗರಂ
ನಡುಕಡೆಯಾವುದೆಂಬುಣಿಸಿನುಜ್ಜುಗವಂ ಮಱೆದಾಚೆಗೀಚೆಗೆ ।
ಲ್ಲಿಡೆಗೆಡೆಯಾಡುವಾಕೆಯರ ಬೆಂಬಟಿಯೊಳ್ ನಿಜಚಿತ್ತಲೋಚನಂ
ಬಿಡದಿರಲೊಲ್ಲದುಂಬ ತೆಱಹೆಲ್ಲಿಯುದೆಲ್ಲಿ ಜನಕ್ಕೆ ಸಂತತಂ ॥೪೫೫॥

ಸರಸವನಾಡಿ ಕಾಡಲರೆಬರ್ ಬಡಿಸಿಟ್ಟ ಪದಾರ್ಥದೊಳ್ ಸಮಂ
ಬರೆ ಪೆಱವಂ ವಿಡಂಬಿಸಲಭೋಜ್ಯಪದಾರ್ಥವನಿಕ್ಕಿ ನಕ್ಕು ಮೆ ।
ಯ್ಗರೆದಿರೆ ವರ್ಣವಂ ಕಠಿಣಮಾರ್ದವವಂ ನವಗಂಡಬಂಧವಂ
ಪರಿಕಿಸಿ ನೋಟದಿಂ ಬೆರಲೊಳಂಟದೆ ಜಾಣ್ಮಿಗುವರ್ ನೃಪಾಲಕರ್ ॥೪೫೬॥

ಮನದೊಲವಿಂ ಪಸಿ[2]ವ[2]ಱಿಯದೆ
ವನಿತೆಯರಾನನವನೆವೆಯನಿಕ್ಕದೆ ನೋಡು ।
ತ್ತನಿಮಿಷಪದವಂ ಪಡೆದುದು
ಜನಸಂತತಿಯಮೃತಸದೃಶಭೋಜನಗೃಹದೊಳ್ ॥೪೫೭॥

1 ರಲ್. 2 ನ.

ತುತ್ತುಗಳಂ ಕೆಲಬರ್ ಕಿವಿ
ಯತ್ತೊಯ್ವರ್ ಬಱಿಯ ಕಯ್ಗಳಂ ಮೆಯ್ಮಱಿಪಿಂ ।
ತುತ್ತುವರರೆಬರ್ ಬಡಿಸಿತ
ನೆತ್ತಣದೆಂದಱಿಯದಿರ್ಪರುಟಿದರ್ ಸತತಂ ॥೪೫೮॥

ಇಕ್ಕಿದ ವಸ್ತುವಂ ಮರಳಿ ಬೇಡುವ ನೀರ್ಗೆಳಸುತ್ತ ಠಕ್ಕಿನಿಂ
ಬಿಕ್ಕುವ ಸಂದುಕಟ್ಟುಱಿದು ಲಲ್ಲೆಯನಾಡುವ ತಂದ ವಸ್ತುವಿ।
ನ್ನಿಕ್ಕುವ ಠಾವದಾವುದೆನುತೊಯ್ಯನೆ ಮೂಡುವ ಧೂರ್ತಪಂಕ್ತಿಗಳ್
ಮಿಕ್ಕವರಂ ಮರುಳ್ಗೊಳಿಸದಿರ್ಪವೆ ಜಾಣೆಯರಲ್ಲದಿರ್ಪರಂ ॥೪೫೯॥

ವ॥ ಅನಂತರಂ,

ಇನಿದೆಡೆಗೊಂಡಿರಲ್ ದಧಿಸಮುದ್ರದಿನುಣ್ಮಿದ ಫೇನಪಿಂಡವೆಂ
ಬಿನವಮಳೇಂದುಬಿಂಬವಿಳೆಯೊಳ್ ದಧಿರೂಪದಿನಿಂಬುವೆತ್ತುವೆಂ ।
ಬನುಪಮಗಂಧದಿಂ ಕುಳಿರ್ವ ಘಟ್ಟಿಮೊಸರ್ ಕೆನೆಗಟ್ಟಿರಲ್ಕದಂ
ವನಜನಿಭಾಸ್ಯೆಯರ್ ಬಡಿಸಿದರ್ ಪದೆದೊಪ್ಪುವ ಪಂಕ್ತಿಪಂಕ್ತಿಯೊಳ್
॥೪೬೦॥

ಕಟ್ಟುಮೊಸರ್ ಸುಱಿವಮೊಸರ್
ಘಟ್ಟಿಮೊಸರ್ ಕೆನೆಮೊಸರ್ ಕರಂ ತೊಳೆಮೊಸರಿಂ ।
ಪಿಟ್ಟುಮೊಸರ್ ಪುಳಿಮೊಸರೆಂ
ದಿಟ್ಟರ್ ಬಟ್ಟಲ್ಗಳಿಂ ಸರೋಜಾನನೆಯರ್ ॥೪೬೧॥

ಗಾವಟೆ ಬೆಲ್ಲವತ್ತವರೆಮಾದಲವಂಬಟೆ ಚೆಳ್ಳಚಿಲ್ಲಕಾಯ್
ಮಾವಿನಕಾಯ್ಗಳೊಪ್ಪುವೆಳಗಪ್ಪುರ ಮಾಗುಳಿಬೇರ್ ಸುಧಾರಸಂ ।
ತೀವಿರೆ ಕಂಪುಪೊಂಪುಟಿಸುವುಪ್ಪಿನಕಾಯ್ಗಳನೇಕವಂ ಕಳಾ
ಕೋವಿದೆಯರ್ ಕೆಲಂಬಿಡಿಯಲಿಕ್ಕಿದರಿಕ್ಕು ಮಗುಟ್ದೆನುತ್ತಿ[ರಲ್]
॥೪೬೨॥

ನಳನಳಿಸುವ ಮೆಣಸಿನ ಕರೆ
ಹುಳಿಯಲ್ಲಂ ಬಿದಿರಕಟಿಲೆಯೇಲಕ್ಕಿಯಕಾಯ್ ।
ಮೊಟಗಿನ ಕಾಯ್ ನೆಲ್ಲಿಯ ಕಾಯ್
ಕಟವೆಯ ಕಾಯ್ ಬೇಱೆವೇಱೆ ಸವಿವಡೆದಿರವೇ ॥೪೬೩॥

ವ॥ ಆಗಳೊರ್ವಳ್,

ಅಲ್ಲದ ಸವಿಯಂ ಕಂಡೊಡೆ
ಬಲ್ಲವನೆಂದೊರ್ವನಂ ವಿಡಂಬಿಸೆ ನಿನಗೇ ।

ನಲ್ಲಂ ಸವಿದೋರ್ಪುದನಾಂ
ಬಲ್ಲೆಂ ನೋಡೆನ್ನ ತೆಱನನೆಂದಂ ಧೂರ್ತಂ ||೪೬೪||

ಮಗಮಗಿಸುವಳೆಯ ಕಟಿಲಂ
ಸೊಗಸದಿರಲ್ಕೆಂಟಿ ಸುಱಿದು ಚಪ್ಪಿಱಿದರರೆಬರ್ |
ಮಿಗೆ ಡಱ್ರನೆ ತೇಗಿ ಮಗು
ಟ್ದಗಲಂ ಬೆಱಗಾಗಿ ನೋಡಿ ವರ್ಣಿಸುತಿರ್ದರ್ ||೪೬೫||

ವ|| ಆಗಳೊರ್ವಂ ಕಟಿಲಂ ಕೊಳಲಂಜಿ ನಿಲೆ,

ಕಳಲಂಜದಿರೆಂದೊಡೆ ಮುಂ
ಕಳವೆಂತೆಂದಱಿಯೆನೆಂದೊಡಿಂದೀರುಳಿಹೊಂ|
ಗಳಸಂಗಳನೊಯ್ವುದೆನಲ್
ನಳಿನಾಕ್ಷಿಗೆ ಮುಗಿದನಿರ್ಕರಂಗಳನೊರ್ವಂ ||೪೬೬||

ವ|| ಬಟಿಯಂ,

ಶಾಕಂ ಲೇಸಾದುವಿಂಪಂ ತಳೆದವಖಿಳ[....]ಚ್ಛೋದನಂ ಭೂ
ಲೋಕಕ್ಕಾ[ಶ್ಚ]ರ್ಯವಾಗಲ್ ಮಗಮಗಿಸಿದ ತುಪ್ಪಂನೆಗಟ್ದೀಪದಾರ್ಥಂ|
ಸಾಕೆಂಬಂತಿರ್ದುದಿಲ್ಲೆಂದಿತರಬುಧಜನಂ ಪ್ರೀತಿಯಿಂ[ನೋಡುತಂ]ತ
ತ್ಪಾಕಪ್ರಖ್ಯಾತಿಯಂ ಬಣ್ಣಿಸಿದರುಚಿತವಪ್ಪುಕ್ತಿಯಿಂ ಭುಕ್ತಿವಂತರ್||೪೬೭||

ಕರಣಂ ತಣ್ಣಿದುವಾಗೆ ಮೆಯ್ ದಣಿಯೆ ಸೌಖ್ಯಂ ಪೆರ್ಚೆಪಂಚೇಂದ್ರಿಯಂ
ಪರಿಣಾಮಂಬಡೆ ಗಿಂಡಿಯಲ್ಲುದಕವಂ ಕಯ್ಯೆತ್ತಿ ಕಯ್ಯೆತ್ತಿ ಬೇ |
ರ್ಗರೆಯಲ್ ಕಣ್ತುನಿದೀಂಟೆ ತೇಗಿ ನಿಮಿಷಂ ಸಂತೈಸಿಕೊಂಡಿರ್ದು ಬಿ
ತ್ತರದಿಂ ಕಯ್ದೊಳೆದೇಂ ಸುಖಂಬಡೆದರೋ ಕಯ್ಗಟ್ಟಿಕೊಂಡೆಲ್ಲರುಂ
||೪೬೮||

ವಾರಾಂಗನೆಯರ್ ಮಣಿಮಯ
ದಾರತಿಯಂ ಬೇವಿನುಪ್ಪಿನಾರತಿಯಂ ಧಾ|
ತ್ರೀರಮಣನಿಷಧಭೂಪತಿ
ಗೋರಣ[1]ದಿನೆ[1]ತ್ತಿ ನಿವಾಳಿಸಿದರನುನಯದಿಂ ||೪೬೯||

ಕಪ್ಪುರವಳುಕಿನ ಬೆರಕೆಯೊ
ಳೊಪ್ಪುವ ವೀಳೆಯವನಿತ್ತು ನಾಲ್ಕುದಿನಂ ಚೆ |
ಲ್ವಪ್ಪುಚಿತವನೀಪರಿಯಿಂ
ದೊಪ್ಪಿಸಿದಂ ನಿಬ್ಬಣಕ್ಕೆ ಭೀಮನೃಪಾಲಂ ||೪೭೦||

1 ದಿಂದೆ.

ವ॥ ಅಲ್ಲಿಂಬಳಿಯಂ,

ಭರದಿಂ ಕಮ್ಮೆಣ್ಣೆಯ ಕೊ
ಪ್ಪರಿಕೆಗಳಂ ಕುಂಕುಮಾಂಬುವಿಂ ತೀವಿದ ಕೊ ।
ಪ್ಪರಿಕೆಗಳಂ ಗಂಧದ ಕೊ
ಪ್ಪರಿಕೆಗಳಂ ಪಂಕ್ತಿಗೊಳಿಸಿದರ್ ಕೇರಿಗಳೊಳ್ ॥೪೭೧॥

ಕೇಸರಿಪೀಠದೊಳ್ ನಿಜಮಹೋತ್ಸವದಿಂ ದಮಯಂತಿಸಂಯುತಂ
ವಾಸವಮೂರ್ತಿ ವೀರನಳಭೂಪತಿ ಮೈಮೆಯೊಳಿರ್ದು ಪುಷ್ಪಸಂ।
ವಾಸಿತಗಂಧದೋಕುಳಿಯನಾಡುವ ಲೀಲೆಯನೀಕ್ಷಿಸಲ್ಕೆ ನಾ
ನಾಸತಿಯರ್ಕಳಂ ಬರಿಸಿಯಂಬುವಿನೋದವನಂದೊಡರ್ಚಿದಂ ॥೪೭೨॥

ವ॥ ಆಗಳ್,

ಹಳದಿಯನುಟ್ಟು ವೇಣಿಯನಳಂಕೆಗೆ ಸಿಕ್ಕಿ ಕುಚದ್ವಯಕ್ಕೆ ಕಂ
ಚುಳಿಕೆಯನಿಕ್ಕಿ ಮಲ್ಲಿಗೆಯ ಮೊಲ್ಲೆಯ ಜಾಜಿಯ [ಹೊನ್ನೆ]ಯದ್ದಣಂ ।
ಗಳನೆಡಗಯ್ಯೊಳಾಂತು ಬಲಗಯ್ಯೊಳಮರ್ಚಿದ ಸೆಂಡದೊಪ್ಪಲೋ
ಕುಳಿಗನುವಾದರಂಗನೆಯರಂಗಜಭಿತ್ತಿಯ ಚಿತ್ರವೆಂಬಿನಂ ॥೪೭೩॥

ನಿಗಳದ ಕೀಲನೊತ್ತಿ ಮಣಿಹಾರವನೊಂದು ಪೆಗಲ್ಗೆ ಸೂಂಕಿಯಂ
ದುಗೆಗಳನೇಱಲೌಂಕಿ ಕಟಿಸೂತ್ರವನೊಳ್ನಡು ಬಳ್ಕದಂದದಿಂ ।
ಬಿಗಿದು ಕುರಳ್ಗೆ ಮುತ್ತುಗಳ ಜೂಳೆಯವಂ ಬಲಿದೊಪ್ಪುವಂಗದೊಳ್
ಮೃಗಮದದಣ್ಪುವೆತ್ತರೆಬರೋಕುಳಿಗಾಯತವಾದರಟ್ಟಿಯಿಂ ॥೪೭೪॥

ಶ್ರೀಸಾಮ್ಯಸ್ತ್ರೀಜನಂ ಜೀರ್ಕೊಳವಿಯನಿಭಶೃಂಗಂಗಳಂ ತಾಳ್ದಿ ಪೆಂಪಿಂ
ದೇಸೀಹಿಂದೋಳದಿಂ ಮಂಗಳಲಲಿತೆಗಳಿಂ ಮಾರ್ಗಹಿಂದೋಳದಿಂದಂ।
ವಾಸಂತೀರಾಗದಿಂ ರಂಜಿಪ ಧವಳಮನುತ್ಸಾಹದಿಂ ಪಾಡುತಂಘ್ರಿ
ನ್ಯಾಸಂ ಚೆಲ್ವಾಗಲೊಲ್ದೋಕುಳಿಯನೆಸಗಿದತ್ತೋಳಿಯಿಂ ಮೇಳವಾಗಲ್ ॥೪೭೫॥

ಪೂವಿನ ಸೆಂಡನಿಟ್ಟು ಪೆಱಪಿಂಗಿರೆ ತಕ್ಕಿಸಿ ತಂದು ಚಂದನಂ
ತೀವಿದ ಹೊನ್ನ ಕೊಪ್ಪರಿಗೆಯೊಳ್ ಪಿಡಿದದ್ದುವ ಮೊಗ್ಗೆಯದ್ದಲುಂ ।
. . . . . . . . . . . . . .
. . . . . . . . . . . . . . ॥೪೭೬॥

[ಬಡನಡುಬಳ್ಕಿಂ]ಕೆದಱಲೊಳ್ನಿಱಸಂಭ್ರಮದಾಟದೇಶ್ಚೆಯಿಂ
ಸಡಿಲಲಮರ್ದ ಕಂಚುಳಿಕೆ ಪೆರ್ಮೊಲೆಯಾಕೆಗೆ ಡಿಳ್ಳವಾಗಲೊ ।

ಳ್ದೊಡವುಗಳಟ್ಟುಱಿಂದುಲಿಯಲಲ್ಲಿ ಕೆಲಂಬರತೀವಧೂರ್ತೆಯರ್
ಪಿಡಿಪಿಡಿದಲ್ಲರಂ ಕೆಡಪಿಯೋಕುಳಿಯಂ ಸುರಿದರ್ ನಿರಂತರಂ ॥೪೭೭॥

ಕುಂಕುಮಸಾರದಿಂ ಮಳಯಜದ್ರವದಿಂ ಘನಸಾರಚೂರ್ಣದಿಂ
ಪಂಕಿಲವಾದ ತಮ್ಮ ತನುಗಳ್ ಪೊಸಲೆಪ್ಪದಿನೀಗಳೀಗಳಿ।
ಟ್ಟಂಕೆಯಿದೆಂಬಿನಂ ಮದನಸೂತ್ರದ ಬೊಂಬೆಗಳಂತಿರೊಪ್ಪಿದರ್
ಕಂಕಣಝುಂಕೃತಂ ಮೆಱೆಯಲೋಕುಳಿಯಾಡುವ ಗಾಡಿಕಾರ್ತಿಯರ್ ॥

ಮುತ್ತಿನ ಬೊಂಬೆಯಂತೆ ಹರಿನೀಲದ ಪುತ್ತಳಿಯಂತೆ ಹೊನ್ನ ಮಿಂ
ಚಿತ್ತಿದ ಮೂರ್ತಿಯಂತೆ ದಮಯಂತಿ ಲಸದ್ಘನಸಾರಚೂರ್ಣದಿಂ।
ಕತ್ತುರಿ[ಬೊಟ್ಟಿನಿಂ]ಘುಸೃಣಕೇಸರರಾಗ[1]ದಿನಂ[1]ಗಶೋಭೆವೆ
ತ್ತುತ್ತಮಕಾಂತೆಯೋಕುಳಿ[2]ಯನಾ[2]ಡಿದಳಾಡೆ ಕುರುಳ್ಗೆ ತುಂಬಿಗಳ್ ॥೪೭೯॥

ರಳಬೆ (?) ಹಿಂಗುವ ಬೆನ್ನನಟ್ಟುವ ನೀರೊಳದ್ದುವ ವೇಣಿಯಂ
ಸೆಳೆವ ಮೊಗ್ಗೆಗಳಂಬನೆಚ್ಚುವ ದೂರದಿಂದ ನಗುತ್ತ ಜೀ।
ರ್ಕೊಟಿವಿಯೆತ್ತುವ ಕಯ್ಯನೊಡ್ಡುವ ಬಿನ್ನಣಂ ತನಿವೆರ್ಚೆಯೋ
ಕುಳಿಯನಾಡಿದುದಂಗನಾತತಿ ನೈಷಧಂ ಪೊಗೞುತ್ತಿರಲ್ ॥೪೮೦॥

ಯುವತಿಯರೆಲ್ಲರೋಕುಳಿಯನಾಡಿ ಬೞಲ್ದು ನಿಲಲ್ ತದೀಯಭಾ
ವವನಱಿದಟ್ಟುಱಿಂ ಕರೆದು ನೂತ್ನ ದುಕೂಲವನಿತ್ತು ಚಿತ್ತದು।
ತ್ಸವವೆಸೆಯಲ್ ವಧೂವರರ ಮಜ್ಜನ[ಭೋಜನ]ಕಾಲವೆಂದು ಬಾಂ
ಧವರೊಡಗೂಡಿ ಭೀಮನೃಪನೊಲ್ದೊಳಪೊಕ್ಕನತಿಪ್ರಮೋದದಿಂ ॥೪೮೧॥

ವ॥ ಅಂತು ಮಜ್ಜನಭೋಜನಾನಂತರಂ,

ಭೀಮನೃಪಾಲಕಂ ನೆರೆದ ನಿಬ್ಬಣಿಗರ್ಗೆ ವಿಚಿತ್ರವಸ್ತ್ರಮು
ಕ್ತಾಮಯಭೂಷಣಂಗಳನನೇಕವನಿತ್ತು ಬೞಿಕ್ಕ ಕೂರ್ತು ನಾ।
ನಾಮಣಿಭೂಷಣಾದ್ಯಖಿಳವಸ್ತುಗಳಂ ನಳಭೂಭುಜಂಗತಿ
ಪ್ರೇಮದೊಳಿತ್ತು ಕಯ್ಮುಗಿದು ಮನ್ನಿಸಿದಂ ಸತತಂ ಪ್ರಿಯೋಕ್ತಿಯಿಂ
॥೪೮೨॥

ತೊಳಗುವ ಭೂಷಣಪ್ರಕರವಂ ಮದಹಸ್ತಿಗಳಂ ತುರಂಗಸಂ
ಕುಳವನನೇಕದಾಸಿಯರನುತ್ತಮವಾರವಿಳಾಸಿನೀಜನಂ।
ಗಳನನುರಾಗದಿಂ ಸಲೆ ವಿದರ್ಭನೃಪಂ ದಮಯಂತಿಗಟ್ಟುಱಿಂ
ಬೞಿವೞಿಯಿತ್ತು ಕಯ್ದಣಿಯನೆಂತುಟೊ ಕೂರ್ಮೆ ನಿಜಾತ್ಮಪುತ್ರಿಯೊಳ್
॥೪೮೩॥

1 ದಿಂದಂ. 2 ಯಾ.

ವ॥ ಅನಂತರಂ,

ಇಂದಗಲ್ವೆಂದವಾದುದಿನಿತಂ ದಯೆಗೆಯ್ ನಳಚಕ್ರವರ್ತಿ ಮ
ನ್ನಂದನೆ ಬಾಲೆಯುಮ್ಮಳಿಸದಂತು ಸಧರ್ಮದಿನೊಲ್ದು ರಕ್ಷಿಸಂ।
ದೊಂದಿರೆ ಕಣ್ಣನೀರ್ ನೃಪನ ಕಯ್ಗೆ ತನೂಜೆಯನೊಪ್ಪುಗೊಟ್ಟು ತಾ
ಯ್ತಂದೆಯ ಹಂಬಲಂ ಮಱೆವುದೆಂದನಟಲ್ದು ವಿದರ್ಭಭೂಭುಜಂ॥೪೮೪॥

ಇಂತು ದಮಯಂತಿಯಂ ಭೂ
ಕಾಂತನನಿಭತುರಗರಥಪದಾತಿಸಮೇತಂ।
ಸಂತೋಷದಿಂದ ಕಳುಪಿದ
ನೆಂತುಟೊ ಸಂಸಾರಬಂಧನಂ ಮಾನವರೊಳ್ ॥೪೮೫॥

ಛಾಯಾಸಂಗದಿನಬ್ಜಮಿತ್ರನೊಲವಿಂದಂ ರೋಹಿಣೀಸಂಗದಿಂ
ಪೀಯೂಷದ್ಯುತಿ ಪೆಂಪುವೆತ್ತು ರತಿದೇವೀಸಂಗದಿಂ ಮನ್ಮಥಂ।
ಶ್ರೀಯಸ್ಸಂತತಿಯಿಂ ವಿರಾಜಿಸುವವೊಲ್ ಭೀಮಾತ್ಮಜಾಸಂಗದಿಂ
ಕಾಯಪ್ರೀತಿಯನಪ್ಪುಕೆಯ್ದು ನಡೆಗೊಂಡಂ ವೀರಸೇನಾತ್ಮಜಂ ॥೪೮೬॥

ವ॥ ಅಂತು ಪ್ರತಿಪ್ರಯಾಣದಿಂ ವಿಮಳಪಟ್ಟಣಸಮೀಪಕ್ಕೆ ಬರೆ,

ಪುರದವರೆಲ್ಲರುಂ ಸಕಳಮಂಗಳವಾದ್ಯವಿಳಾಸದಿಂದಿದಿ
ರ್ವರೆ ಸುಮುಹೂರ್ತದೊಳ್ ವಿಮಳಪಟ್ಟಣವಂ ನಲವಿಂ ಪ್ರವೇಶಮಂ।
ನರಪತಿ ಮಾಡಿ ಪೌರಜನವಿಕ್ಕುವ ಸೇಸೆಗಳಿಂದ ರಾಜಮಂ
ದಿರವನತಿಪ್ರಮೋದದೊದವಿಂ ಪುಗುತಂದನನೂನವೈಭವಂ ॥೪೮೭॥

ಪಲವುದಿನಂ ಮನಂ ಬಯಸಿ ಕಯ್ವಿಡಿದಂಗನೆಯಂಗಸಂಗದಿಂ
ನಲವನನಾರತಂ ಪಡೆದು ರಾಜ್ಯಸುಖಂ ಸತತಂ ಸಲುತ್ತಿರಲ್।
ಕೆಲವುದಿನಕ್ಕೆ ಕಾಂತೆ ನವಗರ್ಭಿಣಿಯಾಗಿ ಕುಮಾರರಿರ್ವರಂ
ಲಲಿತಶರೀರರಂ ಪಡೆದಳರ್ಕಸಮಪ್ರಭರಂ ವಿಳಾಸದಿಂ ॥೪೮೮॥

ಅನುಪಮಸಾರ್ವಭೌಮಪದದಿಂ ದಮಯಂತಿಯ ಸಂಗಸೌಖ್ಯದಿಂ
ತನುಭರಲೀಲೆಯಿಂ ನಳನೃಪಂ ಸುಖದಿಂದಿರಲಿತ್ತಲತ್ತಲಿ।
ರ್ದನಿಮಿಷಮುಖ್ಯನಂ ಶಿಖಿಯನಂತಕನಂ ಜಲಧೀಶನಂ ಜಲ
ಕ್ಕನೆ ಕಲಿಯೊರ್ಮೆ ಕಂಡು ಕರವಂ ಮುಗಿದೇಂ ದುಗುಡಕ್ಕೆ ಕಾರಣಂ
॥೪೮೯॥

ವ॥ ಎಂದು ಕೇಳೆ,

ದಮಯಂತೀಪ್ರಮದಾಸ್ವಯಂವರಮಹೋತ್ಸಾಹಕ್ಕೆ ಪೋಗಿರ್ದ್ದ ವ
ಕ್ರಪಪಾಯ್ತಾಕೆ ವಿಳಾಸದಿಂ ವರಿಸಿದಳ್ ಕೂರ್ಪಿಂ ನಳೋರ್ವೀಶನಂ।
ನಮಗಿನ್ನಾಸೆಯದೇಕೆನುತ್ತಿನಿಬರುಂ ಪೋದಪ್ಪೆವೆಂದಿಂದ್ರವ
ಹ್ನಿಮನಃಖೇದವನೊಲ್ದು ಕೇಳ್ದು ಕಲಿ ಕೋಪೋದ್ರೇಕಮಂ ತಾಳ್ದಿದಂ
॥೪೯೦॥

ವರಿಸಿದ [ದ]ಮಯಂತಿ ಮನೋ
ಹರನಾದ ನಳಂ ನಿತಾಂತವೊರ್ವರನೊರ್ವರ್ ।
ಬೆರಸದ ತೆಱನಂ ಮಾಡ್ಪೆಂ
ಸುರಪತಿ ಮತ್ಸತ್ತ್ವಮಂ ಪರೀಕ್ಷಿಪುದೀಗಳ್ ॥೪೯೧॥

ವ॥ ಎಂದು,

ಭಯಮಂ ಸಾಹಸಮಂ ಮಹಾವ್ಯಸನಮಂ ದಾರಿದ್ರ್ಯಮಂ ಪಾಪಸಂ
ಚಯಮಂ ಕೇಡನಸತ್ಯಮಂ ಕಪಟವಂ ಕೌಟಿಲ್ಯಮಂ ಕ್ಷುದ್ರಬಾ ।
ಧೆಯನನ್ಯಾಯವನವ್ಯವಸ್ಥೆಯನ[ . ]ಕ್ಷೀಮೂಲವಂ [ಮೂ]ರ್ಖವೃ
ತ್ತಿಯನಾರ್ಪಿಂ ಕಲಿ ಕೂಡಿಕೊಂಡು ವಿಮಳಾಧಿಷ್ಠಾನಮಂ ಸಾರ್ದಿದಂ
॥೪೯೨॥

ನಿಂದೆಯನುಗ್ರವಂ ಶಠೆಯನಾಸೆಯನಂಜಿಕೆಯಂ ಜಗಜ್ಜನಾ
ಕ್ರಂದವನುಳ್ಳ ದುಶ್ಚರಿತವಂ ಪರಪೀಡೆಯನಾಜಿಭಂಗವಂ ।
ಮಂದವನೀರ್ಷೆಯಂ ಸಕಳನಿರ್ದಯೆಯಂ ಕಲಿ ಕೂಡಿಕೊಂಡು ಕಾ
ಯ್ಪಿಂ ದಮಯಂತಿವಲ್ಲಭನ ಮಂದಿರವಂ ಕಡುಕೆಯ್ದು ಸಾರ್ದಿದಂ॥

ಕಾಮಕ್ರೋಧಾದಿವರ್ಗಂಗಳನಖಿಳವಿಕಾರಂಗಳಂ ಮಿತ್ರಬಂಧು
ಸ್ವಾಮಿದ್ರೋಹಂಗಳಂ ಕಂಟಕಸಮುದಯವಂ ಭ್ರಾತೃಭೇದಂಗಳಂ ದು।
ರ್ನಾಮಂತಾಳ್ದಿರ್ದವಂ ತನ್ನಯ ಪರಿಕರವಂ ನೂಂಕಿ ಕೊಂಡಾಡಿಕೋಪೋ
ದ್ದಾಮಂಬೆತ್ತೇಪ್ಟೆಯಿಂದಂ ಕಲಿ ನಳನೃಪನಂ ಪೊರ್ದಲುದ್ಯುಕ್ತನಾದಂ
॥೪೯೪॥

ಪ್ರಕಟಮಹಾಪಾತಕತತಿ
ಸಕಲಾವಯವಂಗಳಾಗಿ ರೌದ್ರಾಕೃತಿಯಿಂ ।
ಪ್ರಕುಪಿತಕಲಿ ಸುಕೃತಿಯೆನಿ
ಪ್ಪಕಳಂಕಚರಿತ್ರನಳನನಲೆಯಲ್ ಬಗೆದಂ ॥೪೯೫॥

ವ॥ ಅಂತು ಬಂದು,

ಆಸನಯಾನಸಂಗಶಯನಾಸನಮಜ್ಜನದೇವತಾರ್ಚನಾ
ಭ್ಯಾಸನಿವಾಸವೆಂಬೆಡೆಗಳೊಳ್ ತೆಱಪಂ ನಡೆ ನೋಡಿ ನೋಡಿ ಮೆಯ್ ।

ಬೇಸಱುಮುತ್ತುಕಕ್ಕರಿಕರಂಬಡಪಟ್ಟಿರಲೊಂದು ಸಂದು ಕ
ಟ್ಟಾಸೆಯನಿತ್ತುದೊಳ್ಗುಣವನಾರ್ ಪಡೆವರ್ ಕಲಿ ಸೀಮೆಗೆಯ್ತರಲ್
॥೪೯೬॥

ಒಂದುದಿನಂ ನಳನರಪತಿ
ಹಿಂದಣ ಕಾಲ್ತೊಳೆಯದುದಕವಂ ಮುಕ್ಕುಳಿಸಲ್ ।
ಧಂದದೆಡೆಯಾದುದೆಂದಾ
ಸಂದಿಯೊಳಾತನ ಶರೀರವಂ ಕಲಿ ಸಾರ್ದಂ ॥೪೯೭॥

ಪೇಶಲಯೌವನಕ್ಕೆ ಜರೆ ಸತ್ಕುಲದೇಟೆಗೆ ನಿಂದೆ ತಾಪಸಂ
ಗಾ[ಸೆ] ನೃಪಂಗೆ ಲೋಭವಭಿಮಾನಿಗೆ ದೈನ್ಯವಧೀಶ್ವರಂಗೆ ಹೃ ।
ತ್ಕ್ಲೇಶವ[ನೂನ]ಧಾರ್ಮಿಕಜನಕ್ಕೆ ದರಿದ್ರತೆ ಪೊರ್ದುವಂತೆ ಧಾ
ತ್ರೀಶನಳಂಗೆ ಕರ್ಮವಶದಿಂ ಕಲಿ ಪೊರ್ದಿತು ಪಾರ್ದು ಕಾಲವಂ
॥೪೯೮॥

ವ॥ ಅಂತು ಪೊರ್ದೆ,

ಸುಧೆ ಪುಳಿವಂತೆ ಕಲ್ಪತರು ದುರ್ಗುಣವಂ ತಳೆದಂತೆ ಮಾನಿ ದುಃ
ಖದ ಮರುಳೊಂದಿದಂತೆ ನವಪುಷ್ಪಲತಾಂಕುರಮುಗ್ರಕೀಟಸ ।
ನ್ನಿಧಿವಡೆದಂತೆ ಭೋಗಿ ತನುಕುಷ್ಠವನರ್ಜಿಸಿದಂತಿರಾಯ್ತು ನೈ
ಷಧನೃಪನಂತರಂಗಬಹಿರಂಗಗುಣಂ ಕಲಿ ಪೊರ್ದಲಾಕ್ಷಣಂ ॥೪೯೯॥

ವ್ಯಸನಕ್ಕುದ್ಭ್ರಮಕಕ್ಕ ಕ್ರಮಪದವಿಗೆ ದುರ್ನೀತಿಗನ್ಯಾಯಕಾರ್ಯ
ಪ್ರಸರಕ್ಕಾಚಾರಭಂಗಕ್ಕನವರತಮಸತ್ಯಕ್ಕಹೋರಾತ್ರನಿದ್ರಾ ।
ಲಸಚಿತ್ತಕ್ಕಾಪಗಂ ತನ್ನಳನೃಪತಿ ಮನಂದಪ್ಪವೊಲ್ ಮಾಡಿದಂ ಸಾ
ಹಸದಿಂ ಸೂಕ್ಷ್ಮಸ್ವರೂಪಿಂ ಕಲಿ ಕಲಿಲಗುಣಾನೇಕವಂ ಲೋಕವಂಜಲ್
॥೫೦೦॥

ಸಲೆ ರೋಗಿ ರೋಗದಿಚ್ಛೆಗೆ
ಪಲವುಪದಾರ್ಥಂಗಳಂ ಕರಂ ಬಯಸುವವೊಲ್ ।
ಕಲಿ ಬಂದು ಪೊರ್ದೆ ದುರ್ಗುಣ
ದೊಲವಾದುದು ನಳನೃಪಂಗೆ ದಿವಸಕ್ರಮದಿಂ ॥೫೦೧॥

ಖ್ಯಾತಿಗೆ ರಾಜನೀತಿ ಪೆಸರ್ವೆತ್ತಿತಿಹಾಸಪುರಾಣ[ಶಾಸ್ತ್ರ] ಸಂ
ಗೀತಕಥಾಪ್ರಸಂಗವದು ಮಾಣ್ದು ನಿತಾಂತವಸಭ್ಯಸಂಗದಿಂ ।
ದ್ಯೂತವಿನೋದವಸ್ಥಿರಗುಣಂ ಪರಿಹಾಸವಚಃಪ್ರವೃತ್ತಿ ದು
ರ್ನೀತಿ ದುರಾಗ್ರಹಂ ಹೃದಯದೊಳ್ ನೆಲಸಿತ್ತು ನಳಕ್ಷಿತೀಶನಾ ॥೫೦೨॥

ನಳನೃಪತಿಯ ದಾಯಾದಂ
ಸಲೆ ಬಡವಟ್ಟಿರ್ಪನಲ್ಲಿ ಪುಷ್ಕರನೆಂಬಂ ।
ಕಲಿಯುವನಂ ಪ್ರೀತಿಸಿದಂ
ಗೆಲಲಕ್ಷದ್ಯೂತಕೇಳಿಗಕ್ಷಾಕೃತಿಯಿಂ ॥೫೦೩॥

ಆತಂ ಬಂದುರ್ವಿಪನಂ
ದ್ಯೂತವಿನೋದಕ್ಕೆ ಕರೆಯಲಾಡಲ್ ಬಗೆದಂ ।
ದಾತುರೆ . . . . . . .
. . . . . . . ನಕ್ಷವಂಪಿಡಿಯೆಂದಂ ॥೫೦೪॥

ಕಾಲೋಚಿತಕಿತವರನನ್ಯ
ತಾಲಯರಂ ಪೊರೆಗೆ ಕರೆದು ಪಣಬಂದವನೊ।
ಲ್ದಾಳೋಚಿಸಿ ಡಾಳಿಸಿದಂ
ಸೋಲಕ್ಕಿರ್ದಕ್ಷಯುಗಳವಂ ನಳಭೂಪಂ ॥೫೦೫॥

ಬೇಡಿದ ದಾಯಂ ಬೀಟಲ್
ಪೂಡಿದ ಪಲಗೆಗಳನೆಲ್ಲವಂ ಪುಷ್ಕರನೊ।
ಲ್ದಾಡಿ ಗೆಲಲ್ ಸೋಲಂ ಕಡು
ಗಾಡಲ್ ನಳನೃಪತಿಯೊಡ್ಡಿದಂ ಘನಧನಮಂ ॥೫೦೬॥

ಹಲವೊಡ್ಡವನೊಡ್ಡಿಯುವಂ
ಕಲಿವಶದಿಂ ಸೋಲುತ್ತೆ ಕೋಪಿ ನಳಭೂಪಾಲಂ।
ತಲೆದುಱಿಸುತ್ತಿಱಿಹಿಲ್ಲದೆ (?)
ಛಲದಿಂ ಮತ್ತಾಡಿಯಾಡಿ ಸೋಲುತ್ತಿರ್ದಂ ॥೫೦೭॥

ದಮಯಂತಿ ಬೇಡಬೇಡೆನೆ
ಸಮಸ್ತಭಂಡಾರವಂ ಗಜಾಶ್ವ[.]ಳಿಯಂ।
ನಿಮಿಷದೊಳಾಗಳ್ ಸೋಲ್ತಂ
ಕುಮತಿನಳಂ ಕಲಿಯ ಮಹಿಮೆಯೇಂ ಕೇವಳಮೋ॥೫೦೮॥

ದಮಯಂತಿಕಾಂತೆಯಿರ್ಬರ್
ಕುಮಾರರರಂ ಕುಂಡಿನಕ್ಕೆ ಕಳುಪಿದಳವರಂ।
ರಮಣನ ಜೂಜಿನ ಭಯದಿಂ
ರಮಣಿಯರೊಳ್ ಬುದ್ಧಿ ನಾಲ್ಕುಮಡಿಯಪ್ಪುದಱಿಂ ॥

ಸೋಲಲೊಡನೊಡನೆ ಕೋಪ
ಜ್ವಾಲೆ ಕರಂ ಪೆರ್ಚೆಯೊಡ್ಡಿದಂ ಘನತರಕೋ।
ಶಾಲಯುದ ರತ್ನಖಚಿತಮ
ಹಾಲಂಕಾರಂಗಳಂ ಧರಿತ್ರೀನಾಥಂ ‖೫೧೦‖

ತನಗುಳ್ಳ ರಾಜ್ಯಮಂ ಸಚಿ
ವನಿಕಾಯಂ ಬೆರಸು ಸೋಲ್ತು ಬೞಿಗಾಗೆ ನಳಂ।
ಕುನತಿವಿದಪುಷ್ಕರಂ ಭೋಂ
ಕನೆ ಪೋಗು ಮದೀಯರಾಜ್ಯದಿಂದೆಂದನವಂ ‖೫೧೧‖

ಗುಣಿ ದಮಯಂತಿಯೊರ್ವಳುೞಿಯಲ್ ನವರತ್ನಸುವರ್ಣವಾಜಿವಾ
ರಣನಿಜದಾಸಿದಾಸಧನರಾಜ್ಯಕುಲಾಗತಮಂತ್ರಿವರ್ಗಮಂ।
ಗಣಿಸದೆ ಸೋಲ್ತು ಕಾಂತೆಸಹಿತಂ ನಳಭೂಪತಿ ಬೇಗ ತನ್ನ ಪ
ಟ್ಟಣವನಗಲ್ದರಣ್ಯಪಥದೊಳ್ ನಡೆಗೊಂಡನತೀವ ಖೇದದಿಂ ‖೫೧೨‖

ನಾನಾಗುಲ್ಮಲತಾಂಘ್ರಿಪಪ್ರಕರದಿಂ ತೀವಿರ್ದ ದುಶ್ಶ್ವಾಪದ
ಧ್ವಾನಾಭೀಳಮನೇನುಮಂ ಬಗೆಯದಾತ್ಮಸ್ತ್ರೀಯುತಂ ಭೃತ್ಯಸಂ।
ತಾನಾಭಾವದಿನೊರ್ವನೇ ಹೃದಯಪಶ್ಚಾತ್ತಾಪಮುಬ್ಬುತ್ತಿರಲ್
ಭೂನಾಥಂ ನಡೆದಂ ಸಮಂತು ನೆಲಸಲ್ ದಿಗ್ಭ್ರಾಂತಿ ಕಾಂತಾರದೊಳ್
‖೫೧೩‖

ಒದವಿದ ಪುಂಡರೀಕತತಿಯಿಂ ಪೊಸಪೂಗೊಳನಂ ಹರಿಪ್ರವೋ
ದದಿನಮೃತಾಬ್ಧಿಯಂ ಮೆಱೆವ ಖುಕ್ಷವಿಳಾಸದಿನಂತರಿಕ್ಷಮಂ।
ತ್ರಿದಶಸಮಾಜಮಂ ವಿಮಳಕೌಶಿಕಸಂಗದಿನೆಯ್ದೆ ಪೋಲ್ತು ಪೆ
ರ್ಚಿದ ವಿಪಿನಾಂತಮಂ ನಳನೃಪಂ ನಡೆದಂ ದಮಯಂತಿಸಂಯುತಂ ‖

ಅಡವಿಯೆ ರಾಜ್ಯಮೊಳ್ಪೆಸೆವ ಮಂತ್ರಿ ಮನಂ ಮೃಗಪಕ್ಷಿಸಂಕುಳಂ
ಪಡೆ ಧನಕೋಶಮಸ್ಖಲಿತಧೈರ್ಯಗುಣಂ ದಮಯಂತಿ ಕೂರ್ಪಸಂ।
ಗಡವೆಡೆಗೊಳ್ವ ಕೋಂಟೆ ಭುಜವಿಕ್ರಮದಾಯತಿ ಭಾವಿಸಲ್ಕೆ ತ
ನ್ನೊಡೆತನಮಂಗಮೇಪೊಡಮರಲ್ ನಡೆದಂ ವನದೊಳ್ ನಳೋರ್ವಿಪಂ
‖೫೧೫‖

ಕಡುವಿಸಿಲಟ್ಟೆ ಮೆಯ್ಸೊಡೆದು ಸುಯ್ಯುತ ಕಂಡ ನೆಟಿಲ್ಗೆ ಸಾರ್ವ ನೀ
ರಡಸೆ ಬಟಲ್ದು ಕಂಡುದಕಮಂ ಮೊಗೆದೀಂಟುವ ಕಲ್ಗಳೊತ್ತಲೋ।
ರಡಿಗಡಿಗೊರ್ಮೆ ನಿಲ್ವ ಪಸಿವುರ್ವಿಸಲಿಕ್ಕೆಲದಲ್ಲಿ ಕಂಡ ಕಂ
ಡೆಡೆಯ ಫಲಂಗಳಂ ಬಯಸುವುಜ್ಜುಗಮಾದುದು ರಾಜಪುತ್ರಿಯೊಳ್ ‖

ದಾರಿಯ ಧೂರ್ತರಂತೆ ಸೆಱಗಂ ಪಿಡಿಯಲ್ ಗಿಡು ನಿತ್ಯಮಾರ್ಗಮಂ
ಬಾರಿಸುವಂತೆ ಕಂಟಕವಗುರ್ವಿಸಲೊಪ್ಪುವ ದಾಸದಾಸಿಯುಂ।
ತೋರಡಿಗೊಮ್ಮೆ ಪಾದತಳವಂ ಬಿಡದೊತ್ತೆ ಪರಲ್ಗಳುಗ್ರಕಾಂ
ತಾರದೊಳೊಯ್ಯನೊಯ್ಯನಳವಟ್ಟೆಡೆಯಂ ದಮಯಂತಿ ಮೆಟ್ಟಿದಳ್॥

ಸುಕೃತವನೊಂದಿ ಕೀರ್ತಿ ಶುಭಶೀಲವನೊಂದಿ ಸುನೀತಿಯಾಗಮ
ಪ್ರಕರವನೊಂದಿ ಮಂತ್ರವತಿಯೌವನದೇಟ್ಗೆಯನೊಂದಿ ಲಜ್ಜೆ ವಾ।
ಙ್ನಿಕರವನೊಂದಿ ಭಾವಕ[1]ವಿ[1]ಸ್ಪೃಷ್ಟಿ ಕರಂ ನಡೆವಂದದಿಂ ನಿಜಾ
ಧಿಕನೊಡಗೂಡಿ ಕೂರ್ತು ನಡೆದಳ್ ದಮಯಂತಿ ವಿಶೇಷಭಕ್ತಿಯಿಂ
॥೫೧೮॥

ಆತಪತಾಪವಂ ಸತತದೂರಪಥಶ್ರಮವಂ ತೃಷಾಕ್ಷುಧಾ
ಭೀತಿಯನಾಪ್ತಬಂಧುವಿರಹವ್ಯಥೆಯಂ ಬಗೆಗೊಳ್[2]ದಾ[2]ರ್ಜಿತ।
ಪ್ರೀತಿಯಿನಾತ್ಮವಲ್ಲಭನ ಪಿಂದನೆ ಬಂದಳನೂನಯೌವನ
ಖ್ಯಾತೆ[ಯರಣ್ಯದೊಳ್‌ಸತಿಗೆ] ಕೇವಳಮೇ ಪತಿಭಕ್ತಿಭಾವಿಕಂ ॥೫೧೯॥

ಭೀಕರಪುಂಡರೀಕವನವಾರಣಸೈರಿಭಸೂಕರೋಗ್ರಭ
ಲ್ಲೂಕವೃಕಾದಿದುಷ್ಟಮೃಗಸಂಕುಳದಿಂ ಜರ[3]ಜಂ[3]ತುಸಾರಸಾ(?)।
ಘೂಕಮಯೂರ ವೃದ್ಧನಟಟಿಟ್ಟಿಭಸಂತತಿಯಿಂ ಜರದ್ದ್ರುಮಾ
ನೀಕದಿನದ್ಭುತಂ ಪುದಿದರಣ್ಯವನೆಯ್ದಿದನುರ್ವರಾಧಿಪಂ ॥೫೨೦॥

ಕಕ್ಕರವಂಚೆ ಕೊಂಚೆ ಗಿಳಿ ಸೋಗೆನವಿಲ್ ಕಿಱುವಕ್ಕಿ ಕೊಕ್ಕುವ
ಬ್ಬಕ್ಕಿ ಚಕೋರಿ ಗೌಜು ಹಸುಬಂ ಹೊಱಸಾಂದೆ ಪಸುರ್ತ ಪಾರಿವಂ।
ಕುಕ್ಕುಟನಕ್ಕಜಂ ಹರಡೆ ಹೋದಗೆ ಚಾದಗೆ ಹಂಗನಿಟ್ಟೆ ಬೆ
ಳ್ಳಕ್ಕಿಗಳಿಂ ಮನಂಗೊಳಿಪರಣ್ಯವನೆಯ್ದಿದನಾ ನೃಪಾಳಕಂ ॥೫೨೧॥

ಯುಗನಾಮಂ ನರನಾಮಮಂಗಭವನಾಮಂ ಭೂಮಿನಾಮಂ ಮಹೋ
ರಗನಾಮಂ ಪರಮೇಷ್ಠಿನಾಮಮಿಷುನಾಮಂ ಶಕ್ರನಾಮಂ ಲಸ।
ನ್ಮೃಗನಾಮಂ ವಿಧುನಾಮಮಬ್ಜನಿಲಯಾನಾಮಂ ಸುಧಾನಾಮಮಾ
ವಗಮೊಪ್ಪಿಪ್ಪ ಕುಜಂಗಳಿಂದೆ ಸತತಂ ಚೆಲ್ವಾಯ್ತು ತತ್ಕಾನನಂ ॥೫೨೨॥

ವ॥ ಆ ಸಮಯದೊಳ್,

ಬಿಸಿಲುರ್ಬೆರ್ದುರ್ಸುಡಲ್ ಬಟಲ್ಕೆ ಬಳೆಯಲ್ ನೀರಡ್ಕೆ ಕಯ್ಮೀಱೆ ನಾ
ಲ್ದೆಸೆಗಳ್ ತತ್ತರಿಸಲ್ ಮುಖೇಂದು ಕೊರಗಲ್ ಸತ್ತ್ವಂ ಸಡಿಲ್ದಂಘ್ರಿವಿ।

[1] ನಿ. [2] ಮಾ. [3] ರಂ.

ನ್ಯಸನಂ ಕುಂದಲಗುರ್ವಿಸಲ್ ಶ್ರಮಜಲಂ ಸುಯ್ ಸುಯ್ಯನಟ್ಟಲ್ ಕರಂ
ಪಸಿವಾದತ್ತವನೀಶ್ವರಂಗೆಳಸಿದಂ ಸಾರಾಮಿಷಾಹಾರಮಂ ॥೫೨೩॥

ಮಂಡಲಿಸಿ ಮುಂದಿರಲ್ ಪಲ
ವಂಡಜವಿವನಾರ್ತು ಪಿಡಿ[1]ವು[1]ಪಾಯವನೊಂದಂ।
ಕಂಡೆನೆನುತ್ತವನೀಶಂ
ಗಂಡುಡಿಗೆಯ ಸಣ್ಣ ಸೀರೆಯಂ ಮಿಗೆ ತಳೆದಂ ॥೫೨೪॥

ಸತಿಯುಟ್ಟಿರ್ದಂಬರವಂ
ಪತಿಯರ್ಧವನುಟ್ಟು ತನ್ನ ಸೀರೆಯ ಬಲೆಯಂ।
ಪತಗನಿವಹಕ್ಕೆ ಬೀಸಲ್
ಪತತ್ರಿಗಳ್ ಪಾಱಿಪೋದುವಂಬರಸಹಿತಂ ॥೫೨೫॥

ಅಡಿಯಿಡದೆ ಮೆಲ್ಲಮೆಲ್ಲನೆ
[2]ಕುಡುಕು[2]ಗೊಳುತ್ತಿರ್ಪ ಪಕ್ಕಿವಿಂಡಂ ಪಿಡಿವಂ।
ತುಡುವಂಬರವಂ ಮುಸುಕಲ್
ತಡೆಯದೆ ಪಾಱಿದವು ಸೀರೆಸಹಿತಂಬರದೊಳ್ ॥೫೨೬॥

ಆ ಪಿಡಿದನಾ ಪಿಡಿದನೆಂ
ದೋಪಳ್ ನೋಡಲ್ ಕೆರಳ್ದು ಕಿಱಿದಂತರವಂ।
ಭೂಪತಿ ಪರಿದು ಬಟಲ್ವನು
ತಾಪಂ ತನಿವೆರ್ಚೆ ಮೆಲ್ಲನೀಕ್ಷಿಸುತಿರ್ದಂ ॥೫೨೭॥

ಅಂಬರತಟಕ್ಕೆ ಖಗಕುಲ
ವಂಬರವಂ ಕೊಂಡು ಪಾಱಲೀಕ್ಷಿಸುತಿರ್ದಂ।
ಕಂಬುಗ್ರೀವಂ ನೋಯಲ್
ಕಂಬು ಗ್ರೀಷ್ಮಕ್ಕೆ ಸುಗಿವವೊಲ್ ನೃಪತಿಳಕಂ ॥೫೨೮॥

ದ್ವಿಜನಿಕರಂ ಧೌತಪನ
ಕ್ಕಜದಿಂ ಮೇಲ್ವಾಡಿದು ಪೋಪ ಕೆಱದಿಂದಾಗಳ್।
ದ್ವಿಜನಿಕರಂ ಧೌತವನ
ಕ್ಕಜದಿಂ ಮೇಲ್ವಾಡಿದುಪೋದುದೀಕ್ಷಿಸೆ ಭೂಪಂ ॥೫೨೯॥

ನಯುದಂಬರಂ ಪತಂಗಾ
ಶ್ರಯುವಲ್ಲದೆ ಪಾರ್ಥಿವರ್ಗದೇಂ ಬಾಡೆ ನೃಪಾ।

[1] ದು. [2] ತುಡುತು.

ನ್ವಯ ನೀನಱಿಯದುದೆಯೆನು
ತ್ತ ಯಥಾಮಾರ್ಗಕ್ಕೆ ಪೋದುದಂಡಜಷಂಡಂ ॥೫೩೦॥

ಇರ್ವರ್ಗೊರ್ಂದಂಬರವಾ
ಯ್ತುರ್ವರೆಗಧಿನಾಥನಾಗಿಯುಂ ಕಲಿ ಪೊರ್ದಲ್ ।
ಸರ್ವಜ್ಞನಾದೊಡಂ ಮತಿ
ಖರ್ವತೆಯಂ ಪಡೆವನುೞಿದರೇಂ ದೊರೆ ಧರೆಯೊಳ್
॥೫೩೧॥

ವ॥ ಅಂತು ಪಕ್ಕಿಗಳ್ ಪೋಗೆ,

ವಿಲಸತ್ಕೋಮಲಕಂದಮೂಲಫಲವಂ ಸಂಪ್ರೀತಿಯಿಂ ಮೆಲ್ದು ಪ
ಲ್ವಲಪಾನೀಯವನೀಂಟಿ ಪೆರ್ಚಿದ ತೃಷಾಕ್ಷುತ್ಪೀಡೆಯಂ ನೂಂಕಿ ಭೂ ।
ಜ ಲತಾಚ್ಛಾಯೆಯ ತಂಪಿನೊಳ್ ನಿಮಿಷಮಿರ್ಪನ್ನಂ ಜಗನ್ನೇತ್ರಮಂ
ಡಲವಸ್ತಾಚಲಮಾರ್ಗದೊಳ್ ನಡೆಗೊಳಲ್ ಚೆಲ್ವಾಯ್ತು ಸಂಧ್ಯಾಗಮಂ
॥೫೩೨॥

ಪಡೆಯಂಬರವಂ ಬಿಟ್ಟು
ಜ್ಜ್ವಲನೂತ್ನಾಂಬರವನುಡುವೆನಪರಾಬ್ಧಿಯ ನಿ ।
ರ್ಮಲಜಲದಿಂ ಮಿಂದೆಂಬವೊ
ಲಿೞಿದಂ ಕಮಲಪ್ರಿಯಂ ಪ್ರತೀಚ್ಯಂಬುಧಿಯೊಳ್ ॥೫೩೩॥

ಪೊಸಖದ್ಯೋತಂ ನಿಕುಂಜದ್ರುಮವಿತತಿಯೊಳಿಂಬಾಗೆ ಕಾಂತಾರವಂ ಶೋ
ಭಿಸೆ ಕಾಷ್ಠಜ್ಯೋತಿಗಳ್ ಜಂಬುಕಘನರವವಲ್ಲಲ್ಲಿ ಪೆರ್ಚಲ್ಕುಳೂಕ ।
ಪ್ರಸರಂ ಕೂಗಿಟ್ಟು ಪಾಡಲ್ ತಿಮಿರಪಟಲಮುರ್ವಲ್ ಜಗನ್ನೇತ್ರನಿದ್ರಾ
ವಸಥಂ ತದ್ರಾತ್ರೆ ಕಯ್ಮಿಕ್ಕಿರೆ ನೃಪವರನೊಂದಿಕ್ಕೆದಾಣಕ್ಕೆ ಸಾರ್ದಂ
॥೫೩೪॥

ವ॥ ಅದೆಂತೆನೆ,

ಕಟ್ಟೆ ಕಟಲ್ದು ಭಿತ್ತಿಯುರೆಬಿರ್ದು [. . .] ಸಡಿಲ್ದಿರ್ದ ಜಂ
ಬಿಟ್ಟಗೆ ಕಂಬವೊರ್ಗುಡಿಸಿ ನೆಟ್ಟನೆ ಬಿರ್ದಪುದೀಗಳೀಗಳೇ ।
ಗೆಟ್ಟ[ರು]ಮಿಲ್ಲರರ್ ಪಥಿಕರೆಂಬ ಪುರಾತನದೇವತಾಲಯಂ
ತೊಟ್ಟನೆ ಮುಂದೆ ದಿಟ್ಟಿಗೆಸೆದಿರ್ದುದು ನೈಷಧಚಕ್ರವರ್ತಿಯಾ ॥೫೩೫॥

ಆ ದೇವಾಲಯದೊಳ್ ಸತಿ
ಕಾದಲನ ನಿಮಿರ್ದ ತೊಡೆಯ ಮೇಲೆ ಬಟಲ್ದ ।
ತ್ಯಾದರದಿಂ ಕಣ್ಗಿಯ್ದಳ್
[ಸಾಧ್ವಿಯ] ನೊಂದಧ್ವಖೇದಮೇಂ ಕೇವಳಮೋ ॥೫೩೬॥

ವ॥ ಅಂತು ದಮಯಂತಿ ನಿದ್ರೆಯಿನಿರೆ,

ನಟ್ಟಿರುಳೆದ್ದೊರ್ವ [ನೆ]ಮು
ನ್ನುಟ್ಟುದನೆರ[1]ಡಾ[1]ಗಿ ಕೊಯ್ದು ಮೆಲ್ಲನೆ ಸತಿಗೊಂ ।
ದಿಟ್ಟಗೆಯಂ ತಲೆಗಿಂಬೆನೆ
ಕೊಟ್ಟಡವಿಯೊಳವನಿಪಾಲನೊರ್ವನೆ ತಳರ್ದಂ ॥೫೩೭॥

ವ॥ ಅಂತು ತಳರ್ದು,

ಪೋಗಿ ಮರಳ್ದು ನಿಂದು ಬಿಸುಸುಯ್ದು ಮಗುಳ್ದೆಡೆಯಾಡಿಯಾಡಿ ಕಾಂ
ತಾಗುಣಜಾಳವಂ ನೆನೆವ ಯಾತ್ರೆಗೆ ಪತ್ತಡಿಯಿಟ್ಟು ಕೂರ್ತು ಮ ।
ತ್ತಾಗಳೆ ಬಂದು ನಾರಿಯ ಮುಖಾಬ್ಜವನೀಕ್ಷಿಪ ಬಂಧನಕ್ಕೆ ಬೆಂ
ಡಾಗಿ ನಿತಾಂತವಿಹ್ವಳತೆಯಂ ತಳೆದಿರ್ದನಿಳಾಧಿನಾಯಕಂ ॥೫೩೮॥

ಮಾನಿನಿಯಾಸೆಯಂ ತೊಱೆದು ಪೌರುಷಮಂ ಮಱೆದುಗ್ರಭೀಕರ
ಧ್ವಾನದನೇಕದುಷ್ಟಮೃಗಬಾಧೆಗೆ ಬೆರ್ಚದೆ ಮಧ್ಯರಾತ್ರಿಯೊಳ್ ।
ಮೋನದೊಳುರ್ವರಾಧಿಪತಿಯೊರ್ವನೆ ಕಾನನಮಾರ್ಗದೊಳ್ ಮನೋ
ಗ್ಲಾನಿಯನೆಯ್ದಿ ಪೋದನೆಡೆಗೆಯ್ಯದೆ ನಿಲ್ಲದೆ ಮುಂಬಗಲ್ವರಂ ॥೫೩೯॥

ಕಾಂತಾರಾಗಮನುಟಿದತಿ
ಕಾಂತಾರಾಗದೊಳೆ ನಡೆದು ನೃಪತಿ ಸತತಂ ।
ಶಾಂತಮನಂ ನೈಷಧದೇ
ಶಾಂತಮನಂದೆಯ್ದಲೆಂದು ತಡೆಯದೆ ನಡೆದಂ ॥೫೪೦॥

ವ॥ ಇತ್ತಲ್ ಕಿಱಿದು ಬೇಗದೊಳ್ ದಮಯಂತಿಯ ನಿದ್ರೆ ತಿಳಿಯೆ,

ಒದವಿದನಿದ್ರೆಯೋಸರಿಸೆ ತನ್ನಧಿನಾಥನನಾರ್ತು ನೋಡಿ ಕಾ
ಣದೆ ಬಿಸುಸುಯ್ದು ಮೆಯ್ಮಱೆದು ಸ್ವೈವೆಟಿಗಾಗಿ ಶರಾರುಭೀತಿಯಿಂ।
ಪದವಿಡಲಂಜಿ ಪಾಡಟಿದು ಪೋದಪೆನೆಲ್ಲಿಗೆಲೇ ವಿಧಾತ್ರ ಮ
ನ್ಮದವಿನಿತಾಯ್ತೆನುತ್ತೊಱಲಿ ಬಾಯಟಿದಳ್ ದಮಯಂತಿ ಚಿಂತೆಯಿಂ
॥೫೪೧॥

ಭೂಪತಿಯೆನ್ನೊಳಿಲ್ಲದಪರಾಧವನುಕ್ಕೆವದಿಂ ನಿಜೇಚ್ಛೆಗಾ
ರೋಪಿಸಿ ಮಧ್ಯರಾತ್ರಿಯೊಳರಣ್ಯದೊಳೊರ್ವಳನೀ ಪ್ರಕಾರದಿಂ ।
ಶ್ವಾಪದರಾಜಿಗೊಪ್ಪಿಸಿಯದೆಲ್ಲಿಗೆ ಪೋದ[ನೊಯೆ]ಂದು ಚಿತ್ತಸಂ
ತಾಪವಿಷಾದದಿಂದಬಲೆ ಚಿಂತಿಸುತಿರ್ದಳತಿಪ್ರ[2]ಲಾ[2]ಪದಿಂ ॥೫೪೨॥

ಪತಿಯಂ ಕಾಣದೆ ಕಾಂತೆ ಹಂಬಲಿಸಿದಳ್ ಬೆಂಬಿರ್ದಳತ್ಯಂತದುಃ
ಖಿತೆಯಾದಳ್ ಮತಿಗುಂದಿದಳ್ ಕ[ರ]ಗಿದಳ್ ಬಾಯಾಱಿದಳ್ ಕಾಱಿದಳ್ ।

[1] ದೊ. [2] ತಾ.

ಧೃತಿಗೆಟ್ಟಳ್ ಮರ[1]ವ[1]ಟ್ಟಳೆಯ್ದೆ ಸೆಡೆದಳ್ ಸುಯ್ದಳ್ ಸುರುಳ್ದಳ್ ಭಯಾ
ನ್ವಿತೆಯಾದಳ್ ಬಡವಾದಳಶ್ರುಜಲದಿಂದೋಲಾಡಿದಳ್ ಬಾಡಿದಳ್ ॥೫೪೩॥

ವಲ್ಲಭ ನಿನಗೇಗೆಯ್ದೆಂ
ಹೊಲ್ಲಮೆಯಂ ನಿದ್ರೆಗೆಯ್ಸಿ ಘೋರಾಟವಿಯೊಳ್ ।
ಭಲ್ಲವ್ಯಾಘ್ರಕ್ಕೊಪ್ಪಿಸಿ
ಕಲ್ಲೆರ್ದೆ[2]ಯಿಂ[2] ತನ್ನನುಳಿದು ಪೋಪುದು ಗುಣವೇ ॥೫೪೪॥

ಕ್ಷಿತಿಯೋ ವಾಸವಲಕ್ಷ್ಮಿಯೋ ಗಗನವೇ ದಾವಾಗ್ನಿಯೋ ದಿಗ್ವಧೂ
ತತಿಯೋ ಮಂದಸಮೀರನೇ ಮದನನೇ ಭೂಜಾಳಿಯೋ ಶೈಲವೇ ।
ಲತೆಯೋ ಪಲ್ಲವಪಂಕ್ತಿಯೋ ಕುಸುಮವೇ ನಾನಾಮೃಗಶ್ರೇಣಿಯೋ
ಪತಿಯಂ ತೋಱಿಸಿಮೆಂದು ಸುಂದರಿ ಕರಂ ಬೆಂಬಿರ್ದು ಬಾಯಾಱಿದಳ್
॥೫೪೫॥

ಜನಿಸಿದೆನೇಕೆ ನಾರಿವೆಸರಾಯ್ತೆನಗೇಕೆ ನೆಗಟ್ಟುದೇಕೆ ಯೌ
ವನವವನೀಶನಂ ಬಯಸಲೇಕೆ ಪುನಂ ಕಳಹಂಸೆಯಿಬ್ಬರಂ ।
ನೆನೆದೊಡಗೂಡಲೇಕಕಟ ಸೋಲಲದೇಕೆ ಸಮಸ್ತರಾಜ್ಯವಂ
ವನದೊಳಧೀಶನೆನ್ನನುಳಿದೇಕೆಯಗಲ್ದನಿದೆನ್ನ ದುಷ್ಕೃತಂ ॥೫೪೬॥

ಸುದತೀಜನನಂ ಪ್ರಾರ
ಬ್ಧದಿನಾದೊಡವೇಂ ವಿಧಾತ್ರನೆನಗೊಬ್ಬಳ್ಗಂ ।
ಮುದದಿಂ ಸ್ವೇಚ್ಛಾಪುರಣ
ಪ್ರದನೆನಿ[3]ಸಿ[3]ದೊಡೀಯವಸ್ಥೆಗೊಳಗಾದಪೆನೇ ॥೫೪೭॥

ದುಷ್ಟಮೃಗಸಮಿತಿ ನೋಡಲ
ವಷ್ಟಂಭಿಸಿ ಮಚ್ಛರೀರಮಾಂಸಾಶನದಿಂ ।
ತುಷ್ಟಿಯನೆಯ್ದುವುದೆ[4]ನ್ನೊಳ[4]
ಭೀಷ್ಟಂ ಮೆಯ್ದೋಱವೇಕೆ ಭಲ್ಲವ್ಯಾಘ್ರಂ ॥೫೪೮॥

ನೆನೆದಾಗಳ್ ಜೀವಂ ಭೋಂ
ಕೆನೆ ಪೋಪಂತೊಂದುವರವನನುನಯದಿಂ ಕಾ ।
ಲನೊಳಂದು ಬೇಡದಾಂ ಕೆ
ಮ್ಮನೆ ಕಳಿಪಿದೆನೇಕೆ ಮಱೆದು ಯೌವನಮದದಿಂ ॥೫೪೯॥

---

[1] ಎ. [2] ಯಂ. [3] ಸ. [4] ನ್ನಳ.

ನಲ್ಲರ ಕೂರ್ಮೆ ಜೀವನಮೃತಂ ಮಣಿಭೂಷಣವಿಷ್ಟಸಂಪದಂ
ನಲ್ಲರಗಲ್ಕೆ ದಳ್ಳುರಿ ಸಿಡಿಲ್ ಗರಳಂ ಮರಣಂ ದಿಟಕ್ಕೆ ತಾ।
ನಲ್ಲದೆ ತಂದೆಗಿರ್ತೆಱಿನನೆನ್ನ ಸುಖಾಸುಖದಲ್ಲಿ ಬಾಡ್ಕೆಯಿ
ನ್ನೆಲ್ಲಿಯದೆಂದು ಚಿಂತಿಸಿ ಪಲುಂಬಿದಳಂಗನೆ ತದ್ವನಾಂತದೊಳ್ ॥೫೫೦॥

ಸಮುಚಿತಯಾನಮಂ ನಯಮನೀಕ್ಷಣಮಂ ಮೃದುಳತ್ವಮಂ ಮಹ
ತ್ವಮನೆಡೆಯಾಟದಿಂ ಭುಜದಿನಕ್ಷಿಗಳಿಂದಧರೋಷ್ಠದಿಂ ಕುಚಾ।
ಗ್ರಿಮದಿನದಿರ್ಪ ಗೆಲ್ದ ಪಗೆಯಂ ವನಹಸ್ತಿಲಸಲ್ಲತಾಮೃಗ
ದ್ರುಮಗಿರಿಸಂಕುಳಂ ಸೆಱೆಯೊಳಿಟ್ಟವೊಲಿರ್ದಳತೀವಖೇದದಿಂ ॥೫೫೧॥

ಬಾಲೆಯು [ತನ್ನ] ನಂಬಿದವಳಂ ಬಲಹೀನೆಯನೀಯರಣ್ಯಘೋ
ರಾಲಯದಲ್ಲಿ ಬಿಟ್ಟು ಪೆಱಪಿಂಗುವ ನಿಃಕೃಪೆಯೆಂತು ಮೇದಿನೀ।
ಪಾಲನೊಳಾಯ್ತೊ ಸದ್ಗುಣಗಣಂಗಳವಂತಿರಲೆನ್ನರಾದೊಡಂ
ಕಾಲವಶಂ ಸ್ವರೂಪಸುಚರಿತ್ರದಯಾಸ್ಥಿತಿಯೊರ್ವರಿಚ್ಛೆಯೇ ॥೫೫೨॥

ಎನ್ನನರಣ್ಯದೊಳ್ ಬಿಸುಟು ನಟ್ಟಿರುಳಿರ್ದು ಮಗುಳ್ದ[ನೋ]ಪಣ
ಕ್ಕೆನ್ನಳ ಸಂಗವಂ ಬಯಸಿ ಪೋದನೊ ತತ್ಸತಿಯಾವಪುಣ್ಯಸಂ ।
ಪನ್ನೆಯೊ ವಲ್ಲಭಂ ತೊಲಗದಿರ್ಪವೊಲಾಂ ದ್ವಿಜದೇವಪೂಜೆಯಂ
ಮುನ್ನೆಸಗಿತ್ತುದಿಲ್ಲ ದೊರೆಕೊಂಬುದೆ ಸೌಖ್ಯಸಮೃದ್ಧಿ ಚಿಂತೆಯಿಂ ॥೫೫೩॥

ಪ್ರಾಣಾಧಿನಾಥನೆಂಬುದು
ಕಾಣಲ್ ಪುಸಿಯಾಯ್ತು ನೃಪತಿ ನಿನ್ನೊಡನೆನ್ನೀ।
ಪ್ರಾಣವನೊಯ್ಯದೆ ದುಷ್ಟ
ಪ್ರಾಣಿಚಯಕ್ಕೆನ್ನನಿರಿಸಿ ಪೋಪುದು ಗುಣವೇ ॥೫೫೪॥

ವ॥ ಅನಂತರಂ,

ನೀನೇ ಗತಿ ನೀನೇ ಗತಿ
ನೀನೇ ಗತಿಯೆಂದು ತನ್ನ ಪತಿಯಂ ನೆನೆವು।
ತ್ತಾ ನೀಳಕುಟಿಲಕುಂತಳೆ
ಕಾನನದಿಂ ಮೆಲ್ಲನೊಂದು ದೆಸೆಗಡಿಯಿಟ್ಟಳ್ ॥೫೫೫॥

ವ॥ ಅಂತು ಪೋಪಾಗಳ್,

ವನಮಧ್ಯದೊಳನುಪಮಯಾ
ವನಮಧ್ಯಮನೋಹರಾಂಗಿಯಂ ಕಂಡಾಗಳ್ ।

ವನಚರನೊರ್ವಂ ತತ್ಪಾ
ವನಚರಣಕ್ಕೆಱಗಿ ದಳೆಪಲುದ್ಯತನಾದಂ ॥೫೫೭॥

ಅತಿಶೀರ್ಣಶ್ಮಶ್ರು ಗುಂಜಾಭರಣವರುಣನೇತ್ರಂ ಧನುಃಪಾಣಿ ಮೇಘ
ದ್ಯುತಿದೇಹಂ ಮಾಂಸಗಂಧಾವಯವನಶನಿರೋಮಂ ಶಿಖಂಡೋತ್ತ
ಮಾಂಗಂ ।
ಸಿತದಂತಂ ಕರ್ಕಶೋಕ್ತಿಪ್ರಕುಪಿತಮುಖಸಂರಂಭವತ್ಯಂತರೌದ್ರಾ
ಕೃತಿ ಚಿತ್ತಾಭೀಳವಂ ಪುಟ್ಟಿಸಲಗತಟದಿಂ ಬಂದನೊರ್ವಂ ಪುಳಿಂದಂ
॥೫೫೭॥

ವ॥ ಆಗಳ್,

ನಿನ್ನ ಪತಿವ್ರತಾಚರಣಮಂ ಕಿಡಿಸಲ್ ಬಗೆದಂದವಂ ನಿತಾಂ
ತಂ ನವವಹ್ನಿಗಾಕ್ಷಣದೊಳಾಹುತಿಯಾದಪನೆಂಬನುಗ್ರಹಂ ।
ಮುನ್ನಮರೇಂದ್ರವಹ್ನಿಯಮವಾರ್ಧಿಪರಿಂ ತನಗಾದ ಲಾಭಮಂ
ತನ್ನಯ ಚಿತ್ತದೊಳ್ ಬಗೆದು ನೋಡಿದಳಾಕೆ ಕಿರಾತಧೂರ್ತನಂ ॥೫೫೮॥

ವಿಸ್ಮಯಮಪ್ಪಿನಂ [1]ಖ[1]ಳಪುಳಿಂದನ ನಿಂದ ಮಹತ್ಕಳೇವರಂ
ಭಸ್ಮಮಯಂ ದಲಾಗ್ರ [ . . ] ತಂನೆನೆಕಂಡನುರಾಗಪುರ್ಬಿ ಮಂ।
ದಸ್ಮಿತವಕ್ತ್ರಪಂಕಜೆ ಬಟಿಕ್ಕಟವೀಪದದೊಳ್ ನಿಜಾಧಿನಾ
ಥಸ್ಮರಣಪ್ರಜಾಬಲದಿನೊಂದೆಡೆಗಂಡು ತೆರಳ್ದಳಾಕ್ಷಣಂ ॥೫೫೯॥

ನಾನಾದೇಶದ ಸೆ[2]ಟ್ಟಿ[2]ಗುತ್ತರರೆಬರ್ ಭಾಸ್ವದ್ಬಲೀವರ್ದಸಂ
ತಾನಂ ತಾಳ್ದಿದ ವಸ್ತ್ರರತ್ನಪಿಲಸತ್ಕಸ್ತೂರಿಕರ್ಪೂರಗಂ ।
ಧಾನೀಕಂ ಬೆರಸೊಂದು ಸಿಂಧುತಟದೊಳ್ ಬಿಟ್ಟಿರ್ದುದಂ ಕಂಡು ಲ
ಜ್ಜಾನಮ್ರಾನನೆ ಮೆಲ್ಲಮೆಲ್ಲನೊಲವಿಂ ಸಾರ್ದಳ್ ಮನೋವೇದ್ಯದಿಂ
॥೫೬೦॥

ವ॥ ಆ ಸಮಯದೊಳ್,

ಕಾಲಂ ಕಾಡಾನೆಯಾದಂದದೊಳಿಭಪತಿಯೊಂದಲ್ಲಿಗೆಯ್ತಂದು ನಾಲ್ಕುಂ
ಕಾಲಿಂ ಶುಂಡಾಗ್ರದಿಂ ದಂತದಿನರೆದು ಸಮಸ್ತಪ್ರಜಾಜಾಲವಂ ತ।
ತ್ಕೀಲಾಲಕ್ರೀಡೆಯಿಂದೀಡಿಱಿದು ನಿಲಿಸಿ ತಾಟಿಲ್ಗಳಂ ಕಟ್ಟಿದೆತ್ತಂ
ತೂಲಂಬೊಲ್ ಪಾಱಿಲೂದಿತ್ತುಟಿದರೆಡಬಲಕ್ಕೋಡೆ ಬಲ್ಕಾಡೊಳಿರ್ದರ್
॥೫೬೧॥

ಈ ಪಾಪಿ ಬಂದ ಕತದಿಂ
ದಾಪತ್ಸಂಭವಿಸಿತಿಲ್ಲಿಗೆಂದರೆಬರ್ ನಾ ।

[1] ತ. [2] ದ್ದೆ.

ನಾಪರುಷವಾಕ್ಯದಿಂ ಜಡಿ
ದಾಪೊತ್ತೇ ನೂಂಕಿದರ್ ಸರೋಜಾನನೆಯಂ ॥೫೬೨॥

ಕಲ್ಲೆರ್ದೆಯಾಗಿ ಕಾಂತನ ವಿಯೋಗದ ಬೇಗೆಗೆ ಕಾನನಾಂತದೊಳ್
ನಿಲ್ಲದೆ ಬಂದೊಡಿಲ್ಲಿಯುದಱಿಂ ಮಿಗಿಲಾದುದು ದುಃಖವಕ್ಕಟಿ ।
ನ್ನೆಲ್ಲಿಗೆ ಪೋಪೆನೋ ವಿಧಿಯೆ ದೈವವಿಘಾತಿಯ ನಾತುರ್ಮಾಣಿಸಲ್
ಬಲ್ಲವರಾರೆನುತ್ತ ಬಲೆ ಸೈವೆಱಗಾದಳತೀವ ಖೇದದಿಂ ॥೫೬೩॥

ವ॥ ಅನಂತರಂ,

ಪೆರ್ಬಟ್ಟೆಯೊಂದಿರಲ್ಕಂ
ದೊರ್ಬಳೆ ಪೋಗುತ್ತಿರಲ್ಕೆ [ಕಂಡು] ಕೆಲಂಬರ್ ।
ಪಾರ್ಬರೊಡವಂದರಿವಳತಿ
ದುರ್ಬಲೆ ಸಾರ್ಚುವೆವನಂತನಿಧಿಪಟ್ಟಣಮಂ ॥೫೬೪॥

ವ॥ ಎಂದು ಪೋಗುತ್ತಿರೆ,

ಕಮಳಭವಾಂಡದಿಕ್ಕೆಯೆನಿಪಂದದೊಳೊಪ್ಪುವನೇಕಜಾತಿವ
ರ್ಣಮನೆಡೆಗೊಂಡು ಸರ್ವವಿಷಯೇಂದ್ರಿಯಸಂಪದಸಾರದಿಂದಮು ।
ತ್ತಮವಿಭವಪ್ರಸಿದ್ಧಿಯಿ[1]ನಿನೇಂ[1]ದು ಮನೋಹರವೀಥಿಯಿಂ ನೃಪೋ
ತ್ತಮಗೃಹದಿಂದನಂತನಿಧಿಪಟ್ಟಣವಿರ್ದುದನೇಕಚಿತ್ರದಿಂ ॥೫೬೫॥

ಆ ನಗರಿಯಧಿಪನಖಿಳದ
ಯಾನಿಳಯನನಂತ[2]ಶೇಖರಂ[2] ತದ್ವಧು ಚಂ ।
ದ್ರಾನನೆ ಗುಣನಿಧಿಯೆಂಬಳ್
ದಾನವಮರ್ದನನ ಸತಿಗೆ ಸರಿದೊರೆಯಾದಳ್ ॥೫೬೬॥

ವ॥ ಅಲ್ಲಿ,

ಸೈರಂಧ್ರಿಯೆಂಬ ಪೆಸರಿಂ
ವಾರಿಜಮುಖಿ ಭೀಮರಾಜಸುತೆಯಾ ಸ್ಕಂಧಾ ।
ವಾರವನೊಲವಿಂ ಸಾರ್ದಳ್
ಪ್ರಾರಬ್ಧದ ಬಲೆಯನಟಿವಶೂರರುಮೊಳರೇ ॥೫೬೭॥

ಆಗಳ್ ಕರೆಸಿದಳತ್ಯನು
ರಾಗದೆ ಗುಣನಿಧಿ ನೃಪಾಗ್ರಮಹಿಷಿ ಮನೋಜ ।
ಸ್ತ್ರೀಗೆಣೆ ಸತತಂ ನಾನಾ
ಭೋಗಿನಿ ಸೈರಂಧ್ರಿಯಂ ಪುರಂಧ್ರಿಯರಿಂದಂ ॥೫೬೮॥

[1] ನೆನೆಂ. [2] ಶೈಲರಂ.

ಮಾಸಿದ ಸೀರೆ ನೀಳ್ದು ಜಡೆಗಟ್ಟಿದ ವೇಣಿ ವಿಹೀನಭೂಷಣಂ
ಸೂಸಿದ ಕುಂತಳಾವಳಿ ಮಲೀ[ಮ]ಸಕೋಮಲಮೂರ್ತಿ ಕಾಂತಚಿಂ ।
ತಾಸದನಾನನಂ ಸಕಲಭೋಗವಿವರ್ಜಿತಚಿತ್ತವೃತ್ತಿ ನಾ
ನಾಸಖಿಸಂಗದೂರವೆನಸುಂ ನೆಲಸಿರ್ದುದು ತಲ್ಲತಾಂಗಿಯೊಳ್ ॥೫೬೯॥

ವ॥ ಅದಂ ಕಂಡು,

ಈ ಕಮನೀಯಶರೀರ
ಕ್ಕೇಕತಿಕಲ್ಮಷವನೇಕೆ(?) ವಸ್ತ್ರಾಭರಣಾ ।
ನೀಕವನೀವೆಂ ಮತ್ಸೇ
ವಾಕಾಂಕ್ಷೆಯದುಳ್ಳೊಡೀಗಳೆಲೆ ಸೈರಂಧ್ರೀ ॥೫೭೦॥

ಈ ಪರಿಯೊಳಿರ್ಪೊಡಿರ್ಪೆಂ
ವ್ಯಾಪಾರಂ ಗಂಧಕಾರನೀಶಂ ಮತ್ಸೇ(?) ।
ವಾಪಥವಿದು ಮಣಿವಸ್ತ್ರಂ
ಸೋಪಾಧಿಕವೊಲ್ಲೆನೇನುಮಂ ನೃಪಕಾಂತೇ ॥೫೭೧॥

ಅದನೇಗೆಯ್ದುವನೀಶನ
ಸುದತಿಯುಂ [ . ] ಬೆತ್ತು ಘಟ್ಟಿವಳ್ತಿಯನಾವಾ ।
ಗದೊಳಿರಿಸಿ ಪುತ್ರಿಯೆಂಬಂ
ದದಿನೊಲವಿಂ ಸಲಹುತಿರ್ಪಳನುದಿನವವಳಂ ॥೫೭೨॥

ಕಿಱಿದುದಿನಮಿರ್ದು ತಿಳಿದಳ್
ಕುಱುಪಂ ನೃಪಕಾಂತೆ ನೀಂ [ಮಗಳೆನಗೆ] ನಿನಗಾಂ ।
ಕಿಱಿಯಬ್ಬೆಯೆಂದು ಪೇಳ್ದ
ಟ್ಕುಱುಮಿಗೆ ಮಿಗಿಲಾಯ್ತನೂನನಿತ್ಯಸ್ನೇಹಂ ॥೫೭೩॥

ಅಕ್ಷದ್ಯೂತವನಾಡಿ ನೈಷಧನೃಪಂ ಸಾಮ್ರಾಜ್ಯಮಂ ಸೋಲ್ತು ಚಿ
ತ್ತಕ್ಷೋಭಂ ತನಿವೆರ್ಚಿ ಕಾಂತೆಸಹಿತಂ ತದ್ದೇಶಮಂ ಬಿಟ್ಟು ಸ ।
ನ್ನರ್ಕ್ಷಂ ತೀವಿದರಣ್ಯಮಾರ್ಗದಿನನೇಕಾಯಾಸದಿಂ ಪೋದನ
ನ್ನಕ್ಷೇತ್ರಕ್ಕಿದು ನೈಜವೆಂದು ಪಲರಿಂ ಕೇಳ್ದಂ ವಿದರ್ಭೇಶ್ವರಂ ॥೫೭೪॥

ಭುವನದೊಳತಿಪೂಜ್ಯರೆನಿ
ಪ್ಪವನೀಶ್ವರರಂ ಪಲಂಬರಂ ಕಳುಪಿದನೊ ।

ಲ್ದು ವಿಚಾರಿಸಲ್ ನಳೋರ್ವೀ
ಧವನಂ ದಮಯಂತಿಯಂ ವಿದರ್ಭನೃಪಾಲಂ ॥೫೭೫॥

ಪಲವೆಡೆಯಂ ಪೊಕ್ಕವನೀ
ತಿಲಕವೆನಲ್ ಮೆಱೆವನಂತನಿಧಿಪಟ್ಟಣಮಂ।
ಪಲಬರ್ ಭೂಸುರರೊಲವಿಂ
ಸಲೆ ಪೊಕ್ಕರ್ ಕಂಡರಲ್ಲಿ ಭೀಮಾತ್ಮಜೆಯಂ ॥೫೭೬॥

ವ॥ ಅಂತು ಕಂಡು,

ದಮಯಂತಿಯಿರ್ದ ದುಃಖ
ಕ್ರಮಮಂ ಭೀಮಂಗೆ ಭೂಸುರರ್ ಪೇೞಲ್ ತ।
ದ್ರಮಣಿಯನಾಪ್ತರಿನುರ್ವೀ
ರಮಣಂ ಕರೆಸಲ್ಕೆ ಬಂದಳಸ್ಥಿರಗತಿಯಿಂ ॥೫೭೭॥

ಪಾಡೞಿದು ಕೋಮಳಾಂಗಂ
ಬಾಡೆ ನಿಜಾವಯವದಮಳಮಣಿಭೂಷಣಮಂ।
ನೋಡುವಡೆದೋವಿನೋಲೆಯ(?)
ತೋಡುಟಿಯಲ್ ಪೊಕ್ಕಳಬಲೆ ಜನಕಾಲಯಮಂ ॥೫೭೮॥

ವ॥ ಇತ್ತಲ್,

ವನದೊಳ್ ನಂಬಿಸಿ ನಿದ್ರೆಗೆಯ್ಸಿ ಸತಿಯಂ ದಾಕ್ಷಿಣ್ಯಮಂ ಸ್ನೇಹಬಂ
ಧನಮಂ ಶೋಕವನಾದಿಯಂ ಬಗೆಯದುನ್ಮತ್ತಂಬೊಲುದ್ದೇಶದಿಂ।
ದನುತಾಪಂ ಕಡೆಗಣ್ಮೆ ವಿಹ್ವಳತೆಯಿಂ ದಿಗ್ಭ್ರಾಂತಿ ಮೆಯ್ವೆರ್ಚಲೊ
ರ್ವನೆ ಪೋದಂ ನಳನನ್ಯದೇಶಪದಮಂ ಸಾರುತ್ತ ಕಾಂತಾರದೊಳ್ ॥೫೭೯॥

ಕುಜಸಂದೋಹದಿನಂಧಕಾರಮನಿಶಂ ತೀವಿರ್ಪ ದುಶ್ಶ್ವಾಪದ
ವ್ರಜಘೋರಧ್ವನಿಯಿಂ ನಿಕುಂಜನಿಕರಂ ತೀವಿರ್ಪ ನಾನಾಜರ।
ದ್ಬಜಗಪ್ರೋನ್ಮುಖಪೂತ್ಕೃತಂ ದೆಸೆಗಳೊಳ್ ಪೆರ್ಚಿರ್ಪರಣ್ಯಾಂತಮಂ
ರಜನೀಮಧ್ಯದೊಳೆಯ್ದಿದಂ ಹೃದಯದೊಂದುದ್ವೇಗದಿಂ ಭೂಭುಜಂ ॥೫೮೦॥

ತರತರದ ಪ್ರವಾಳಲತೆಯಿಂ ಕಡಲಂ ಘ[ನ]ಕೀಚಕಾಳಿಯಿಂ
ಕುರುಕುಲಮಂ ರುಚಿಪ್ರಚುರಚಿತ್ರಶಿಖಂಡಿಯಿನಂತರಿಕ್ಷಮಂ।
ಹರಿಬಲದಿಂದ ಪಾಂಡುಸುತರಂ ಕಮನೀಯಸಹಸ್ರನೇತ್ರದಿಂ
ಸುರಪನನೆಯ್ದೆ ಪೋಲ್ತಧಿಕಪಾವನಮಂ ಪಡೆದಿರ್ದುದಾ ವನಂ ॥೫೮೧॥

ಕಾಕಳಿಯ ವೇಣುನಾದಂ
ಗೋಕುಲನಂ ತೀವೆ ವಿಮಳಸದ್ವೃಕ್ಷಚ್ಛಾ ।
ಯಾಕೌತುಕದಿಂ ಕಾಂತಾ
ನೀಕದಿನದು ಗೋಪಮೂರ್ತಿಯಂ ಪ್ರಕಟಿಸುಗುಂ॥೫೮೨॥

ವ॥ ಅದಱೊಳ್,

ಬಟಲುತ್ತಂ ನಿಡುಗಣ್ಗೆ ದಿಗ್ಭ್ರಮೆ ಮಿಗಲ್ ಕಾಂತಾರದೊಳ್ ಸಂತತಂ
ತೊಟಲುತ್ತಂ ಮಗುಡ್ದಾಂ ಮನೋರಮಣಿಯಂ ಕಾಣ್ಬಂದವೆಂತೆಂದು ಸು।
ಯ್ದಲುತ್ತಂ ಧಗೆ ಕೈಕೊಳಲ್ ಮತಿಗೆಡುತ್ತಂ ಚಿತ್ತದೊಳ್ ದೈವಮಂ
ಪಟಿವುತ್ತಂ ನಡೆದಂ ನೃಪಾಲತಿಲಕಂ ದೇಶಾಂತರಾಯಾಸದಿಂ ॥೫೮೩॥

ವ॥ ಅಂತು ಪೋಗೆವೋಗೆ,

ದಿಗ್ನಿಕರಕ್ಕೆ ಪೆರ್ಚಿ ಕಡು ಕರ್ಬೊಗೆಯಿಂ ಕಿಡಿಯಿಂ ನೆಗಟ್ಟಿದಾ
ವಾಗ್ನಿ ಕವಲ್ದು ಪರ್ವೆ ಮೃಗಪಕ್ಷಿಭುಜಂಗಪುಳಿಂದಸಂಕುಳಂ ।
ಮಗ್ನವನೆಯ್ದೆ ದಗ್ಧಮಯವಾಗಲದಂ ತವೆ ಕಂಡು ಭೂಪನು
ದ್ವಿಗ್ನಮನಂ ಮದೀಯಪಥವೆಂತೆನುತಿರ್ದನತೀವಚಿಂತೆಯಿಂ ॥೫೮೪॥

ಹೊದಱಿಂ ಪೊಕ್ಕು ಕುಜಾಗ್ರಿಮಕ್ಕಡರ್ದು ಪುಲ್ಲಂ ಸರ್ಬಿ ದುಷ್ಪ್ರಾಹಿವೃಂ
ದದ ಬೆಂಬತ್ತಿ ಮೃಗಾಳಿಯಂ ತವಿಸಿ ಪಕ್ಷಿಶ್ರೇಣಿಯಂ ತುತ್ತಿ ಪೆ।
ರ್ಚಿದ ವಂಶಂಗಳ ವಂಶವಂ ದಹಿಸಿ ಘೋಷಾನೀಕವಂ ತೀರ್ಚಿ ಕಾ
ಯ್ವೊದವಲ್ ನಾಲ್ದೆಸೆಗೆಯ್ದೆ ಚಾರಿವರಿಯಿತ್ತಾಭೀಳದಾವಾನಳಂ ॥೫೮೫॥

ದೂರದೊಳಿರ್ದು ಕರ್ಬೊಗೆಯ ಪೆರ್ಬಲೆಯಂ ತವೆ ಬೀಸಿ ತಚ್ಛಟಾ
ಕಾರದ ಬೊಬ್ಬೆಯಿಂ ಮೃಗವನೆಬ್ಬಿಸಿ ಬಲ್ಗಿಡಿಯಿಟ್ಟಿಯಿಂದಿಡು ।
ತ್ತೋರಣದಿಂ ಪೊದಟ್ಟಿರಿಯ ಕೂರಲಗಂಬುಗಳಿಂದೆಸುತ್ತ ಕಾಂ
ತಾರದೊಳಾಡಿದಂ ನವದವಾನಳಭೂಪತಿ ಬಿಲ್ಲ ಬೇಂಟೆಯಂ ॥೫೮೬॥

ಗಡಣದ ಮತ್ಸಖಿ ಕಡುಪಿಂ
ನಡೆದುದೆ ಮನ್ಮಾರ್ಗವೆಂದು ಬಿಱುಗಾಳಿಯು ಪೀ।
ರ್ದಡಿಯಿಟ್ಟಂ ಬೇಂಟೆಗೆ ಪೇ
ರಡವಿಯೊಳತಿ ಕೋಪದಿಂ ದವಾನಳಭೂಪಂ ॥೫೮೭॥

ವನವನಮಾಲಿಯುಟ್ಟ ನವಪೀತಪಟಂ ವನದೇವಿ ತೊಟ್ಟ ಕಾಂ
ಚನಮಯಭೂಷಣಂ ವನಗಜಾಳಿಗೆ ಬೀಸಿದ ಹೊನ್ನಱೆಂಚೆ ತ।

ದ್ವನವಿಲಸತ್ಸರೋವರಕನತ್ಕನಕಾಂಬುಜವೆಂಬಿನಂ ಮಹಾ
ವನದೊಳಗುರ್ಬುರ್ವೆತ್ತುದು ದವಾನಳಮಾಲೆ ಸುದೀಪ್ತಿಜಾಲದಿಂ ॥೫೮೮॥

ವ॥ ಮುತ್ತಮಲ್ಲಿ [1]ಕೋಡೂ[1]ಱಿ ಕೆಡೆವ ಕಾಡಾನೆಗಳಿಂ, ನೀಡಿದ ನಾಲಗೆಯೊಳ್ ನೊರೆ ಸುತ್ತಿ ಘುರುಘುರಿಸಿ ಜಲವನಱಿಸಿ ಬಱಲ್ವ ಲುಲಾಯಂಗಳಿಂ, ಉರಿ ಮುಸುಂಕೆ ಕರಿಕರಿದು ದಿಂಡುಗೆಡೆವ ಪುಂಡರೀಕಂಗಳಿಂ, ಕರ್ಬೊಗೆ ಕವಿಯೆ ಕಲ್ಲ ಗಪಿಯೊಳ್ ಕೆಡೆವ ಭಲ್ಲೂಕಂಗಳಿಂ, ಇಕ್ಕೆಯಿಂ ದಿಂಕಿಕ್ಕಲಾಱದಲ್ಲಿಯೆ ಮುಗ್ಗುವ ಹುಲ್ಲೆವಿಂಡುಗಳಿಂ, ಕೊಳ್ಳಿಗಿಡಿ ತಾಗಲಳ್ಳೆವೊಯ್ದು ಬೀಳ್ವ ಬೆಳ್ಳೆರಳೆಗಳಿಂ, ಉರಿಯಟ್ಟಿ ಪರಿಪರಿದು ತೊರಳೆವಾಯ್ದುರುಳ್ವ ಮರೆವಿಂಡುಗಳಿಂದೋರಡಿಯಿಂದವೆ ಧಾರಿಣಿಯಂ ತಾರೆ ಬೀೞ್ವ ಸಾರಂಗಗಳಿಂ, ಕಿಱುಗಿಡಿಗಳ್ ಚುಱುಚುಱ್ರನೆ ತಾಗಿ ನಿಱುನಿಱುಗುಟ್ಟಿ ಮುಱಿಯಂ ಕೊಂಡೋಡಲಾಱದೆ ಗುಂಡುಗೆಡೆವ ಕೋಡಗಂಗಳಿಂ, ಪಕ್ಕಂ ಸೀದು ಮುಕ್ಕುಱಿಬಿಡ್ದ ಪಕ್ಕಿಗಳಿಂ, ಮೊರೆಮೊರೆದು ಸರವಿಯಂತೆ ಸುವಿಯಂತೆ(?) ಸುರುಳ್ದು ಕೆಡೆವುರಗಂಗಳಿಂ, ಸರ್ವಾಂಗವಂ ಕರ್ಬೊಗೆ ಸುತ್ತೆ ಕೊರ್ಬಿದೋಡಲಂ ಬಿಡುವ ಪೆರ್ಬಾವುಗಳಿಂದಗುರ್ಬುರ್ವೆತ್ತುವಂತು ಮಲ್ಲದೆಯುಂ,

ಘೋರತರಪ್ರಭೂತದವವಹ್ನಿ ಮಹಾಟವಿಯೊಳ್ ಚಟಚ್ಚಟಾ
ಕಾರದಿನುಣ್ಮಿ ಕರ್ಬೊಗೆಯ ಮುರ್ಬುರಿ ಪರ್ವಿ ಸಮಸ್ತ ಜೀವಸಂ ।
ಹಾರವಿದೆಂಬಿನಂ ದೆಸೆಯನಾಕ್ರಮಿಸುತ್ತಿರಲಲ್ಲಿ ದೈನ್ಯಪೂ
ತ್ಕಾರದಿನಿರ್ದುದೊಂದಜಗರಂ ಸತತೋಗ್ರಗರಂ ಭಯಂಕರಂ ॥೫೮೯॥

ಘಟಯೋನಿಯ ಹೃತ್ಕೋಪೋ
ತ್ಕಟಶಾಪದಿನಿಳೆಗೆ ಕೆಡೆದ ನಹುಷನವೊಲ್ ದು ।
ರ್ಘಟ ದಾವಾನಳನೊಳ್ ಸಂ
ಕಟದಿಂದಿರ್ದುದು ಬಱಲ್ಕೆಯಿಂ ಗೋನಾಸಂ ॥೫೯೦॥

ಕಾಳಿ ಕರಾಳಿ ಭೈರವಿ ಮಹಾಯಮದೂತಿಕೆಯೆಂಬ ದಾಡೆಗಳ್
ಬಾಳಶಶಾಂಕನಂತೆ ಮಿಱುಗಲ್ ತನುಕಾಂತಿಗೆ ತಪ್ತಕಾಂಚನಂ ।
ಕೀೞೆನೆ ಧಾತ್ರಿಯೊಳ್ ಕೆಡೆದ ಯೋಜನಬಾಹುವಿನಂದದಿಂದತಿ
ಸ್ಥೂಳಶರೀರದೊಂದಜಗರಂ ಪೊರಳುತ್ತಿರೆ ಕಂಡನುರ್ವಿಪಂ ॥೫೯೧॥

ವನವಹ್ನಿಯ ಭಯದಿಂ ಭೋಂ
ಕೆನೆ ತೊಲಗಿಸಿ ಜೀವದಾನವಂ ಕೊಡುವ ಮಹಾ ।

[1] ತೋದೂ.

ತ್ಮನದಾವನೆಂದತಿಕ್ರಂ
ದನದಿಂದಿರ್ದುದು ವಿಷಾನನಂ ಕಾನನದೊಳ್ ॥೫೯೨॥

ವ॥ ಅಂತಿರ್ದಜಗರಂ ಪ್ರಜಾನಾಥನಂ ಕಂಡು,

ಭೀತನನುಗ್ರಪಾವಕಪರೀತನನುತ್ತಮನಾಗವಂಶಸಂ
ಭೂತನನುದ್ಧೃತಾಪಹತಚೇತನನೂರ್ಜಿತಬುದ್ಧಿಶಾಸನಂ ।
ಖ್ಯಾತನನಚ್ಛವಾಯುಪರಿಪೀತನನಾದಿ (?) ಸಮೇತನಂ ಧರಿ
ತ್ರೀತಳನಾಥ ರಕ್ಷಿಸೊಲವಿಂ ಶರಣಾಗತವಜ್ರಪಂಜರಾ ॥೫೯೩॥

ವ॥ ಎಂಬುದುಂ,

ನಿನ್ನಯ ಪೆಸರಂ ಪೇಳೆಲೆ
ಪನ್ನಗಯೆನಲಾದೊಡಷ್ಟಕುಲನಾಗರೊಳಾ ।
ದೆನ್ನ ಪೆಸರ್ ಕರ್ಕೋಟಕ
ನಿನ್ನೇನಂ ಪೇಳ್ವೆನವನಿಪಾಲಲಲಾಮಾ ॥೫೯೪॥

ಇನಿತು ಬೃಹದ್ದೇಹವನಾ
ನೆನಿತಂತರವಾಂತು ಪೋಪೆನಹಿಪತಿಯೆನೆ ಮ।
ತ್ತನುವತಿಲಘು ಕೊಂಡೊಯ್ದು
ನ್ನನೊಂದು [1]ನಿರ್ದಾವದಲ್ಲಿ[1] ನಿಱಿಸು ಮಹೀಶಾ ॥೫೯೫॥

ವ॥ ಅದಲ್ಲದೊಡಂ,

ನೂಱುನ್ನೂಱೆನ್ನೆ ನಾಂ ಪತ್ತಡಿಯನೆಣಿಸಿಕೊಂಡೆನ್ನನಿನ್ನೊಂದುತಾಣಂ
ಬೇಱೆಂಬಂತಿಟ್ಟು ನೀಂ ರಕ್ಷಿಪುದೆನಲಹಿಯಂ ಪೊತ್ತು ಭೂಪಾಲಕಂ ಬಾ ।
ಯಾಱುತ್ತಂಭಾರದಿಂಗೋಣ್ಕುಸಿಯಲಡಿಗಳಿಂದೊಂದೆರಡ್ಮೂಱುನಾಲ್ಕೈ
ದಾಱೇಳೆಂಟೊಂಬತುಂಪತ್ತೆನೆ ಸರಭಸದಿಂ ಪತ್ತಿಕಚ್ಚಿತ್ತು ಸರ್ಪಂ ॥೫೯೬॥

ವಿಶದಯಶೋನ್ನತನವನಿಪ
ನಶಕ್ತನೆನಿಪಹಿಯನಾಂತ ಗಣನೆಗಳಡಿಯಂ ।
ದಶಯೆನಲಾಡಿತ್ತಾಗಳ್
ಪಿಶುನರ್ಗುಪಕಾರಮುಂಟೆ ವಸುಧಾತಳದೊಳ್ ॥೫೯೭॥

ವ॥ ಆಗಳುಂ,

ಮೂಗುಮುರುಂಟಿ ಕಣ್ಗಳೊಳಸಾರ್ದು ಬೆರಲ್ ಮಿಗೆ ಡೊಂಕಿ[2]ಚೆ[2]ಲ್ವಮೆ
ಯ್ಯಾಗಳೆ ಗಂಟುಗಟ್ಟಿ ಕಿವಿ ಸುಕ್ಕಿ ಮುಖಂ ಕಡುಗಂದಿ ಗೋಣ್ ಕರಂ ।

[1] ನಿರ್ವಾವದಲ್ಲಿ. [2] ಕ.

ಬಾಗಿ [1]ಮಡಂ[1] ಸುರುಳ್ದು ನಿಖಿಳಾವಯವಂ ವಿಪರೀತವಾಗಿಯು
ದ್ವೇಗದೊಳಿರ್ದನಾಗಳವನೀಪತಿ ದುರ್ವಿಷದುಷ್ಟಬಾಧೆಯಿಂ ॥೫೯೮॥

ವ॥ ಆಗಳ್,

ಅತ್ಯುಪಕಾರವಂ ನಿನಗೆ ಮಾಡಿದ ಮತ್ತನುವಿಂಗೆ ಮತ್ತಿದೇಂ
ಪ್ರತ್ಯುಪಕಾರವುಗ್ರವಿಷವಹ್ನಿಯನೀವುದು ದುಷ್ಟಪನ್ನಗಾ ।
ಪತ್ಯಚಯಕ್ಕೆ ಪಾಲನೆಱೆಯಲ್ ವಿಷವಾದಪುದೆಂಬ ಗಾದೆಯಂ
ಸತ್ಯವನಾಗಿಸಲ್ ಪಡೆದಳಲ್ಲವೆ ಕದ್ರು ಭುಜಂಗವಲ್ಲಭಾ ॥೫೯೯॥

ನೀನಾರ್ತುರ್ ಪಸಿದು ಮಜ್ಜೀ
ವಾನಿಲನಂ ಪೀರ್ವುದುಚಿತವಲ್ಲದೆ ತನುವಂ ।
ಮಾನವವನೆಯ್ದಿಪುದುಚಿತವೆ
ಕೀನಾಶಪ್ರತಿಭೆಯೇಕೆ ಪವನಾಹಾರಾ ॥೬೦೦॥

ಛಿದ್ರನಿವಾಸರಂ ಪದವಿಹೀನರನಶ್ರುತರಂ ದ್ವಿಜಿಹ್ವರಂ
ಕ್ಷುದ್ರರನುಗ್ರರಂ ಕುಟಿಲಮಾರ್ಗಿಗಳಂ ವಿಷನೇತ್ರರಂ ಘನೋ ।
ಪದ್ರವಶೀಲರಂ ನೆಗಟ್ದ ಭೋಜನನಪ್ರಿಯರಂ ಕೃತಘ್ನರಂ
ರೌದ್ರತರಾಸ್ಯರಂ ಬೆರಸುವಾತನನೀತಿಯಸೇತುವಲ್ಲವೇ ॥೬೦೧॥

ವ॥ ಅದಲ್ಲದೊಡಂ,

ಮಾತೇಂ ಕೃತಘ್ನನಿಂದಂ
ಪಾತಕಿಗಳ್[2]ದಾ[2]ರ್ ಪೆಱರ್ ಮಹಾಪಾತಕನಂ ।
ಘಾತಪ್ರಾಯಶ್ಚಿತ್ತಂ
ಭೂತದಯಾಸ್ಥಿತಿ ಕೃತಜ್ಞಗುಣಸದ್ಭಾವಂ ॥೬೦೨॥

ಪರಪೀಡೆಯನೆಸಗುವವಂ
ನರಕವನುಂಡುಂಡು ದಣಿಯನೇತೆಱದಿಂದಂ ।
ಪರಸುಖವಂ ಚಿಂತಿಸುವಂ
ನಿರಂತರಂ ಸ್ವರ್ಗಲೋಕಶೇಖರನಲ್ತೇ ॥೬೦೩॥

ಜರೆಯಿಂ ವ್ಯಾಧಿಯಿನಾಧಿಯಿಂ ವ್ಯಸನದಿಂ ದುಸ್ಸಂಗದಿಂ ದುಃಖದಿಂ
ದರಿಯಿಂ ಬಂಧುವಿಯೋಗದಿಂ ವಿಷಯದಿಂ ಮೋಹತ್ವದಿಂ ಲೋಕಮು ।
ತ್ಸರದಿಂ ಕ್ಷೀಣವನೆಯ್ದುಗುಂ ತನುವಿದಂ ಕೂಡುಂಡು ಮತ್ತೇಕೆ ಮ್ಮೈ
ಮರವಟ್ಟನ್ಯರ ಪೀಡೆಯಂ ಬಯಸುವರ್ ದೋಷಾ[3]ವಿಲರ್ಗಾವಿಲರ್[3]॥

[1] ಮಡಂಪಿ. [2] ವಾ. [3] ವಿಳಗ್ಧಾವಿಳರ್.

ಇದನಱಿದದೇಕೆ ಮದ್ದೇ
ಹದ ಕಾಂತಿಯನಟಿದು ಜಪಪವನುಟಿದೆ ಎಲೆ ದು ।
ರ್ಮದಚಿತ್ತ ನಿನಗದೇನಾ
ದುದು ಫಲವೆನ್ನನ್ನರೊಳರೆ ನಿನಗತಿಮಿತ್ರರ್ ॥೬೦೫॥

ಪತ್ತೆಂದೊಡೆ ಪತ್ತಿದೆನಿದು
ಚಿತ್ತಕ್ಕೆ ವಿರೋಧಮಾಯ್ತು ನಿನಗಿದು ಮೇಲಿ ।
ನ್ನುತ್ತಮಕಾರ್ಯಾಸ್ಪದವಾ
ನಿತ್ತಪೆನಂಬರವನುತ್ತರಕ್ರಿಯೆಗೀಗಳ್ ॥೬೦೬॥

ವ॥ ಎಂದು,

ಮೃದುನಾಗವಸ್ತ್ರಮೆರಡಂ
ಪದೆದಿತ್ತಂ ಫಣಿಪನವನಿಪಂಗಿದು ನಿನ್ನಂ।
ಗದ ಕಲಿ ಪೋಗಲ್ ಬೇಗಂ
ಪೊದೆಯಲ್ ನಿನ್ನಂಗಕಾಂತಿಯಂ ಪ್ರಕಟಿಸುಗುಂ ॥೬೦೭॥

ಆ ನಾಗವಸ್ತ್ರಮೆರಡಂ
ಭೂನಾಥಂ ಸೀಳ್ದು ತನ್ನ ತೊಡೆಯೊಳ್ ಬೈಚಿ।
ಟ್ಟೇನಿಲ್ಲಿಗೆ ಕಜ್ಜವೆನು
ತ್ತಾನಮ್ರಶಿರಸ್ಕನಾಗಿ ಮಿಗೆಪೊಡಗೊಂಡಂ ॥೬೦೮॥

ವ॥ ಅನ್ನೆಗಂ ಮುಂದೆ,

ಗೋಪುರದೊಳ್ ತೆಱಂಬೊಳೆಯೆ ರತ್ನಕನತ್ಕಳಶಂಗಳಿಂದಮು
ಷ್ಟ್ಯಾಪದಭಿತ್ತಿಯೊಳ್ ತರತರಂಬಿಡಿದಿರ್ಪ ಪತಾಕೆಯಿಂ ನವ।
ದ್ವೀಪವಿದೆಂಬಿನಂ ನಯನಕೌತುಕವಾಗಿರೆ ಕಾಣಲಾಯ್ತಯೋ
ಧ್ಯಾಪುರರಾಜಧಾನಿ ಸಕಲಾವನಿಪಂಗಿದಿರೊಳ್ ಮುದಂ ಮಿಗಲ್ ॥೬೦೯॥

ಸುಂದರಿಯಪ್ಪ ಪಾರಿದಿವಮಂದಿರೆಯರ್ ಭವನೇತ್ರವಹ್ನಿಯಂ
ನಂದಿಸಿ ಶೀತಳಾಂಬುಕಳಶಾಮೃತವಂ ತಳೆದಂಗಸೌಷ್ಠವಂ ।
ಕುಂದದ ಮಾಡ್ಕೆಯಿಂ ಮುಗುಳ್ದು ಕಾಮನನೆಬ್ಬಿಸಲೆಂದು ಸಂತತಂ
ನಿಂದಪರೆಂಬಿನಂ ಸೊಬಗಿನುನ್ನತಿಯಂ ತಳೆದರ್ ವಿಳಾಸದಿಂ ॥೬೧೦॥

ಸ್ತನಕಳಶಂ ಸುವರ್ಣಕಲಶಂ ನವನಿರ್ಮಳಶೀತಳಾಂಬು ಯೌ
ವನರಸವಾಸೆಗೆಯ್ವ ಸುವಿಟರ್ ಪಥಿಕರ್ ನಯನಪ್ರಭಾವಿಭಾ ।

ವನೆ ಶಿಶಿರಾಲಯಂ ಮೃದುಕಳಧ್ವನಿ ಸೀರ್ಪನಿ ಜಂಗಮಪ್ರಪಾ
ಘನತರಗೇಹವೆಂಬ ತೆಱದಿಂ ಮೆಱೆದತ್ತ ಬಲಾಕದಂಬಕಂ ॥೬೧೧॥

ಕರತಳವಂಬುಜಂ ನಿಡುವೆರಲ್ ಕುಮುದಂ ಕರಜಂ ಮೃಣಾಳನ
ಲ್ಲರಿ ಪೊರೆದಿರ್ದಲಕ್ತಕರಸಂ ಮಕರಂದರಸಂ ಮಹೋರ್ಮಿಕಾ ।
ವಿರಚನೆಯೂರ್ಮಿ ಕಾಂತ ಕಮನೀಯಜಲಂ ತೆರೆಗಳ್ ಲಸತ್ಪ್ರಪಾ
ತರುಣಿಯರಂಬುಜಾಕರವಿಳಾಸವನೀವರಸಂಖ್ಯಪಾಂಥರೊಳ್ ॥೬೧೨॥

ವ॥ ಅದಱಿಂ ಮುಂದೆ,

ಅಗೆವೊಯ್ದಂ ಮನ್ಮಥಂ ಭಾಸುರಪುರವರಭೂಜಾತಸದ್ಬೀಜವಂ ಧಾ
ತ್ರಿಗಲಂಕಾರಂ ಪ್ರಜಾಸಂತತಿಯಭಿಮತಚಿಂತಾಫಲಂ [1]ಕುಂ[1]ದದಿರ್ಪಂ ।
ತಗರುಶ್ರೀಖಂಡಚಾಂಪೇಯಕಕುರವಕಪುನ್ನಾಗಮಾಕಂದ[2]ಶಾಲಾ[2]
ದಿಗಳಿಂ ಪೆಂಪಿಂದಯೋಧ್ಯಾನಗರಿಯ ಬಹಿರುದ್ಯಾನಸಂತಾನವಾಗಲ್ ॥

ವಿಹಗಪ್ರಧ್ವಾನಗಾನಂ ಭ್ರಮರನಿವಹಝುಂಕಾರಗಂಭೀರವಾದ್ಯಂ
ಬಹುಶಾಖಾಂದೋಳಲಾಸ್ಯಂ ಮಧುಕಣಗಣಪುಷ್ಪಾಂಜಲಿಕ್ಷೇಪವುದ್ಯತ್ ।
ಸಹಕಾರೋರ್ವೀಶ್ವರಾಂಗಂ ನೆಲಸಿರೆ ವಿಮಳಶ್ರೀಯನಾಳ್ದಿರ್ದಯೋಧ್ಯಾ
ಬಹಿರುದ್ಯಾನಂ ವಿಳಾಸಂಬಡೆದುದು ನಟರಂಗಸ್ಥಳಂಬೊಲ್ ನಿತಾಂತಂ ॥೬೧೪॥

ವರದಳಿತಪ್ರಸೂನಮಕರಂದರಸಾಮೃತಪೀನಪಾನದಿಂ
ಮೊರೆವ ಮಧುವ್ರತಂ ಮದಮಧುವ್ರತಮಂ ಕಮನೀಯಪಂಚಮ ।
ಸ್ವರದಿನದಿರ್ಪುವನ್ಯಭೃತವನ್ಯಭೃತಧ್ವನಿಯಂ ಕನರ್ನಿರಂ
ತರವನುವಾದನಂಬಡೆವ ರಾಜಶುಕಂ ಪಿರಿದಾ ವನಾಂತದೊಳ್ ॥೬೧೫॥

ದ್ವಿಜಸಂತತಿ ಮುಕ್ತಾಖಾ
ನಿಜಾಶ್ರಿತಸ್ಥಿತಿಯನಿರ್ಪವೊಲ್ ತದ್ವನದೊಳ್ ।
ದ್ವಿಜಸಂತತಿ ಮುಕ್ತಾಖಾ
ನಿಜಾಶ್ರಿತಸ್ಥಿತಿಯನಿರ್ಪುದೆನಲೇನೊಗಪ್ವೆಂ ॥೬೧೬॥

ಸಾಲ್ವಿಡಿದಾಮ್ರಭೂಜದೆಳಗೊಂಬುಗಳೊಳ್ ಪಸುರ್ವೆತ್ತು ಬಿಣ್ಪಿನಿಂ
ನೇಲ್ವ ಫಲಂ ಸುವರ್ಣಘಟದಂದದಿನಿಪ್ಪೆಳನೀರ ಭಾರದಿಂ ।
ಜೋಲ್ವುದು ನಾಳಿಕೇರಮಮರ್ದಂ [3]ಸವಿಯಿಂ ಬರವಾರ್ದು[3] ದಟ್ಟಿಸಲ್
ಸಾಲ್ವ ಮಡಲ್ತ ಬಕ್ಕೆಪಲಸೊಪ್ಪುಗುಮಾವನದೊಳ್ ನಿರಂತರಂ ॥೬೧೭॥

---

[1] ಯಂ. [2] ಳಾಮಾ [3] ಸವಿಯಂಬರನಾರ್ದು.

ಹೊದಱೆಸೆಯಲ್ ಮ[1]ಡಲ್ತ[1]ಮರುಗಂ ತೆನೆಗಟ್ಟಿ [ದ] ಪಚ್ಚೆ ಕಂಪುತೀ
ವಿದ [2]ದವನಂ[2] ನಿಮಿರ್ದ ಮುಡಿವಾಳವರಲ್ವಿರುವಂತಿ ಮೊಗ್ಗೆ ತುಂ |
ಬಿದ ಪೊಸಜಾಜಿಯುಲ್ಲುಗುವ ಮಲ್ಲಿಗೆ ಮತ್ತಮನೇಕಪುಷ್ಪಸಂ
ಸದಮೊಗೆದಿರ್ಪ ತದ್ವನವಿಶೇಷವಶೇಷಜನಪ್ರಿಯಾವಹಂ ||೬೧೮||

ಲಲಿತಲತಾಕುಮಾರಿ ಸಹಕಾರಕುಮಾರನನಪ್ಪಿ [3]ಕೂರ್ಮೆ[3]ಯಿಂ
ನಲಿದೊಡಗೂಡಿ ಪುಷ್ಪವತಿಯಾಗಿ ಸುಗಂಧವ ಪೂರ್ಣಗರ್ಭದಿಂ |
ಸಲೆ ಮಕರಂದವಂ ಪಡೆದು ಭೃಂಗಚರಂ ಬರಲಿತ್ತು ತದ್ವನ
ಸ್ಥಳಗೃಹದೊಳ್ ಗೃಹಸ್ಥಸುಖಮಂ ತಳೆದಿರ್ಪಳತೀವರಾಗದಿಂ ||೬೧೯||

ಅರಸಂ ಮನ್ಮಥಮುನ್ಮದಾಳಿ ಸಚಿವಂ ಕೀರಂ ಸಖಂ ಸೈನಿಕಂ
ಪರಪುಷ್ಟಾದಿವಿಹಂಗಮಂ ನಿಜಧನಂ ಮಂದಾನಿಲಂ ಕೋಂಟೆ ಮಾ |
ಮರನೆಲ್ಲಾಕುಜಸಂಕುಳಂ ಜನಪದಂ ಚೆಲ್ವಾಗೆ ಸಾಮ್ರಾಜ್ಯ ಸುಂ
ದರವಂ ಸೂಚಿಸುಗುಂ ಮನೋಹರವನಂ ಸಪ್ತಾಂಗಸಂಪತ್ತಿಯಿಂ||೬೨೦||

ವ|| ಅಲ್ಲಿಂ ಮುಂತೆ,

ಪೊಂಬೆಸನೆಂಬಿನಂ ಕಣಿಶಸಂತತಿ ಪೊಣ್ಮೆ ಸುವರ್ಣಕಾಂತಿಯಿಂ
ದಿಂಬಿನಿತಿಲ್ಲದಂತು ಧರೆ ನುಣ್ಬಸುರಿಂ ಪೊರೆಯೇಱಿ ಚೆಲ್ವನಾ |
ಯ್ತಂಬುಜನೇತ್ರನಂಗರುಚಿಯುಂ ವಸುಧಾಂಗನೆ ಪಚ್ಚುಗೊಂಡಳೆಂ
ದೆಂಬಭಿಶಂಕೆಯಿಂ ಕೞಮಶಾಲಿಯ ಶಾಲಿವನಂ ಜನಾವನಂ ||೬೨೧||

ಮಿಸುಪ ವನಶಾಲಿವನದಾ
ಪಸುರ್ಪು ನಳನಳಿಸಿ ಸುತ್ತಲುಂ ಪರ್ವಲ್ [4]ನಾ |
ಲ್ದೆ[4]ಸೆ ಹರಿದಾಖ್ಯವನಾಂಪುದು
ಫೊಸತೇ ಸಂಸರ್ಗಗುಣವದೇಂ ಕೇವಳಮೇ ||೬೨೨||

ಶ್ರೀಶಾಲಿ ರಕ್ತಶಾಲಿ ಮ
ಹಾಶಾಲಿ ಕದಂಬಶಾಲಿ ರಾ[5]ಜಾನ್ನಂ[5] ನಾ |
ನಾಶಾಲಿ ಕೞವೆ ಮೆಣಸಿಗೆ
ಕೇಸರಿವೆಸರಿಪ್ಪೆಗೞವೆ ಶಾಲಿವಿಶೇಷಂ ||೬೨೩||

ವ|| ಅಲ್ಲಿ,

ಕೞವೆಯ ಕೆಯ್ಗೆ ಪಾಯ್ವ ಗಿಳಿವಿಂಡುಗಳಂ ದನಿಗೈದು ಸೋವ ಕೋ
ಮಳೆಯರ ಸಣ್ಣ ನುಣ್ಗೊರಳನಾಲಿಸಿ ಮನ್ಮಥಚಾಪ ಶಿಂಜಿನೀ |

---

1 ಮದತ್ತ. 2 ವದನಂ. 3 ಕಮ್ಮೆ. 4 ನಾಂದೆ. 5 ಬಾನಂ.

ಕಳಕಳಶಂಕೆಯಿಂ ಪಥಿಕಕಾಮುಕಸಂತತಿ ತಮ್ಮ ಚಿತ್ತವಿ
ಹ್ವಳತೆಯನೆಯ್ದೆ ಮುಂದುಗಿಡುವರ್ ಕಡುಪಿಂ ನಡೆಗೆಟ್ಟು ಬಟ್ಟೆಯೊಳ್ ॥

ಏಕೆಯೊ ಮಾಡಿದಂ ವಿಧಿ ಘಟಸ್ತನಪಂ ನಡುಸಣ್ಣವಂ ಮೃಗಾ
ನೀಕವನಟ್ಕಱಿಂ ಪರಿದು ಸೋವ ಬಲಂ ಕಿಡುವಂತು ಭಂಗಿಸಲ್ ।
ಕೋಕಿಳರಾಜಕೀರತತಿ ಬಂದು ಬಟಿಲ್ಕೆಯನೀವವೆನ್ನವೆಂ
ಬಾಕುಳಚಿತ್ತದಿಂ [1]ಕಟಿನು[1]ದೊಳ್ ನೆಲಸಿರ್ಪುದು ಪಾಮರೀಜನಂ ॥೭೨೫॥

ತೆನೆಯುಂ ಕರ್ಚಿ ನಭಕ್ಕೆ ಪಾಯ್ವ ಗಿಳಿವಿಂಡಂ ಮಂಡಲಾಕಾರವಂ
ಕನಲಾಂತೀಕ್ಷಿಪ ಪಾಮರೀಜನದ ನೇತ್ರಜ್ಯೋತ್ಸ್ನೆ ನೀಳ್ದತ್ತನಂ ।
ಗನ್ನಪಾಲಂಗೆ ತಳಿರ್ತ ಪೀಲಿದಪೆಗೊಂಡಿಂದೂಪಲೋದ್ದಂಡನೂ
ತನದಂಡಂ ನೆಲೆಗೊಂಡವೊಲ್ ವಿಟಮನಸ್ಸಂಪ್ರೀತಿಯಿಂ ಕಾಂತಿಯಿಂ ॥

ಕವಣೆಯೊ ಕಾಮಪಾಶವೊ ಪೊದಟ್ಟಿದುಗಲ್ಗಳೊ ಪಾಯ್ವನಂಗಬಾ
ಣವೊ ಗಿಳಿ ಸೋವ ನುಣ್ದನಿಯೊ ಮನ್ಮಥಮಂತ್ರವೊ ಪುಲ್ಲೆವಿಂಡು ಬೆ ।
ಚ್ಚುವ ಬಳೆಗೆಯ್ಯ ಮೆಲ್ಲುಲಿಪೊ ನಲ್ಲರ ಲಲ್ಲೆಯೊ ಪೇಟೆನಲ್ ವಿಳಾ
ಸವನೆಡೆಗೊಂಡ ಪಾಮರಿಯರೊಪ್ಪುವರಾ ಕಟಿಮಪ್ರದೇಶದೊಳ್ ॥೭೨೭॥

ಪೊಱವೊಟಿಲಚ್ಚನಂದನವನಂ ಕಟಿಮಸ್ಥಳಿಪುಷ್ಪವಾಟವೊ
ಳ್ಗೆಱೆ ಕೃತಕಾದ್ರಿ ಶೈತ್ಯಜಲಶಾಲೆ ಗಜಾಶ್ವವಿಹಾರಭೂಮಿ ಕಾ ।
ಯ್ದುಱುಗಲ ಸಾಲ್ಮರಂ ಪರಿದುಕುಂದದ ನೀರ್ ಪರಿಕಾಲ್ ನಿರಂತರಂ
ಮೆಱೆವಿನೆಗಂ ಪ್ರಸಿದ್ಧಿವಡೆದತ್ತು ನೆಗೆಟ್ಟಗಯೋಧಿಪಟ್ಟಣಂ ॥೭೨೮॥

ಆಕಾಶಂ ನಿಕಷೋಪಲಂ ತನಗೆನಲ್ ಚೆಲ್ವಾದ ಹೇಮೋನ್ನತ
ಪ್ರಾಕಾರಂ ಶರಧಿಪ್ರಮಾಣಪರಿಖಾಚಕ್ರಂ ಮಹಾಟ್ಟಾಳಕಾ ।
ನೀಕಂ ತಿದ್ದಿ ನಿಮಿರ್ದ ಡೆಂಕಣಿಮಿ[2]ಳಿರ್[2] ನಾನಾಪತಾಕಾಧ್ವಜ
ವ್ಯಾಕೀರ್ಣಂ ಸುರಶೈಲಮಂ ನೆನೆಯಿಸಲ್ ಪೋಲ್ದತ್ತಯೋಧ್ಯಾಪುರಂ
॥೭೨೯॥

ಪವಣಿಲ್ಲದ ಗೋಪುರವೊ
ಪ್ಪುವ ಸತ್ಕುಲರಾಜಹಂಸವೀಧಿಯಿನಾಕಾ ।
ಶವನಿಟಿಕೆಯ್ಗುಂ ನಾನಾ
ನವರತ್ನವಿತಾನದಿಂದಯೋಧ್ಯಾನಗರಂ ॥೭೩೦॥

---

[1] ಕಮಳ. [2] ಳಂ.

ಗೋಪುರದಿಂ ರಂಜಿಪಯೋ
ಧ್ಯಾಪುರಿ ಸುಮನಃಪ್ರಕೀರ್ಣಪುಣ್ಯಾವಸಥಾ ।
ಷ್ಟಾಪದ ಕಳಶೋತ್ಕರದಿಂ
ಗೋಪುರಮಂ ಪೋಲ್ಟುದೆಂಬುದೊಂದಚ್ಚರಿಯೇ ॥೬೩೧॥

ಗಣನಾತೀತ ಭುಜಂಗರಾಜನಿಕರಕ್ರೀಡಾಸಹಸ್ರಾಂಗಣಂ
ಗಣಬದ್ಧಪ್ರಿಯಮಾಣಮಂಗಳಲಸತ್ಸೌಭಾಗ್ಯಘಂಟಾವಿಶೇ ।
ಷಣಭೇರೀರವವಾವಗಂ ಸ್ಮರಧನುರ್ಜ್ಯಾಘೋಷವೆಂಬಂದದಿಂ
ಗಣಿಕಾಗೇಹದೊಳೊಪ್ಪಿರಲ್ ಸೊಬಗಿನಿಂ ಚೆಲ್ವಾಯ್ತಯೋಧ್ಯಾಪುರಂ ॥೬೩೨॥

ಅವಿರಳಲಜ್ಜಾಕಂಚುಕ
ವವಯವದಿಂ ಪಿಂಗೆ ತಮ್ಮ ಕಾಲ್ಗಿಡೆ ಗಣಿಕಾ ।
ಯುವತೀನಿತಂಬವಲ್ಮೀ
ಕವನೆಡೆಗೊಂಡಿರ್ಪುದುರುಭುಜಂಗಪ್ರಕರಂ ॥೬೩೩॥

ಸಲೆ ನೀರಂ ಪೊತ್ತನೀಶಂ ಸುರವರನೆನಸುಂ ಲಜ್ಜೆಗೆಟ್ಟಂ ವಿಧಾತ್ರಂ
ತಲೆಗೊಟ್ಟಂ ನಾರಿಯಾದಂ ಹರಿ ದಿನಪತಿ ದುರ್ನಾಮವಂ ಪೊತ್ತನೆಂದುಂ।
ನೆಲೆಗೊಳ್ಗಂ ವಾಯು ಚಂದ್ರಂ ಪರವನುಟಿದನಿನ್ನನ್ಯರೇನಾಗರೆಂದು
ಜ್ವಲನೇತ್ರಾಂಭೋಜೆಯರ್ ತಮ್ಮಯ ಸೊಬಗನತಿಸ್ತೋತ್ರವಂ ಮಾಡುತಿರ್ಪರ್ ॥೬೩೪॥

ಹಯಗಜರತ್ನವಸ್ತ್ರಘನಸಾರಮೃಗೋದ್ಭವರೋಹಣದ್ರುಮ
ತ್ರಯವಖಿಳೇಂದ್ರಿಯಪ್ರಿಯತರೋತ್ತಮಮುಖ್ಯಸಮಸ್ತವಸ್ತುವಿ ।
ಕ್ರಯವಿತರೇತರಪ್ರಚುರಪೂಜ್ಯವಣಿಗ್ವರರಿಂ ನಿರಂತರಂ
ನಿಯತದೊಳೊಪ್ಪುಗುಂ ವಿಪಣಿ ವಿಶ್ರುತಸುಂದರಪೀಥಿವೀಥಿಯೊಳ್ ॥೬೩೫॥

ಸಕಲಸುಕೃತಪ್ರಧಾನಸುಕವೀಂದ್ರಪುರೋಹಿತಸೌಧಶಾಲಿಪೀ
ಠಿಕೆನವರತ್ನಗೋಪುರವಿರಾಜಿತನಿರ್ಮಲರಾಜಮಂದಿರಂ ।
ಸುಕರಶಲಾಕೆಹೇಮಕಳಶಂ ವಿಲಸತ್ಕುಸುಮಾಳಿಯಾಗೆ ಕೌ
ತುಕವೆನಿಸಿತ್ತಯೋಧಿಪುರಮುತ್ತಮಕೀರ್ತಿಪರಂ ಮನೋಹರಂ ॥೬೩೬॥

ಪ್ರತಿಪಕ್ಷಕ್ಷತ್ರಿಯಪ್ರಾಕ್ತನನಿಖಿಳಧರಾಕೋಶಸೇನಾಚಯಸ್ವೀ
ಕೃತನುದ್ಯದ್ಧಾರ್ಮಿಕಂ ಪಾವನಚರಿತನನಿಂದಾಪರಂ ದೋಷಸಂಪ।

ರ್ಜಿತನಾಶಾಪೂರಿತಪ್ರಕಟವಿಶದಯಶಂ ವಂದಿಮಂದಾರಭೂಜಂ
ಋತುಪರ್ಣಂ ತತ್ಪು[1]ರಕ್ಕಧಿಪ[1]ನನುಪಮತೇಜಂ ಕಳಾನೀಕನ್ಯೈಜಂ॥೬೩೭॥

ವ॥ ಅಂತಿರ್ದಯೋಧ್ಯಾಪುರವಂ ನರನಾಥಂ ಪೊಕ್ಕು,

ಅಗಣಿತವತ್ಯಪೂರ್ವತರಮುತ್ತಮಲಕ್ಷಣಮುನ್ನತಾನನಂ
ಸುಗಮನಚಿತ್ತವಬ್ಧಿರವಹೇಷಿತಮುಜ್ಜ್ವಲವರ್ಣ ಮಗ್ರಸಂ ।
ಯುಗಜಯಸತ್ತ್ವವಾದನಯನಪ್ರಿಯವೊ . . . ವಾಜಿಶಾ
ಲೆಗೆ ನಡೆತಂದನೊಲ್ದು ನಳಭೂಪತಿ ಬಾಹುಕನೂತ್ನನಾಮದಿಂ ॥೬೩೮॥

ನರನಾಥಂ ಪರಮೋತ್ಸವಂಬೆರಸು ಪೂರ್ವಪ್ರೀತಿ ಮೆಯ್ವೆರ್ಚಿ ಮಂ
ದುರವಂ ಪೊಕ್ಕು ಕುಳೀರ ಸೈಂಧವ ಮಹಾಸೌರಾಷ್ಟ್ರ ಕಾಂಭೋಜ ಬ ।
ರ್ಬರ ಯೌಧೇಯ ಖುರಾಸ ಬಾಹ್ಲಿಕಧರಾಜಾತಾಶ್ವಮಂ ನೋಡಿ ತ
ತ್ತುರಗಾಧ್ಯಕ್ಷನನೆಯ್ದಿಸಂತವಡೆದಂ ತಾಂ ಬಾಹುಕಾಖ್ಯಾನದಿಂ ॥೬೩೯॥

ವಿಜಯಸ್ತಂಭಪ್ರತಿಷ್ಠಾಪರನಿರುಪಮಬಾಹಾಬಲಂ ವೀರಸೇನಾ
ತ್ಮಜನುಗ್ರಾರಾತಿಕಾಲಂ ನಿಷಧವಿಷಯನಾಥಂ ವಿದರ್ಭಾಂಗನಾವಾ ।
ರಿಜನೇತ್ರಪ್ರೀತಿಕಾಂತಂ ನಳನರಪನಯೋಧ್ಯಾಪುರಾಧೀಶವಾಜಿ
ವ್ರಜಸೇವಾಜೀವಿಯಾದಂ ವಿಧಿವಶವನದಂ ಮಾಣಿಸಲ್ ಬಲ್ಲನಾವಂ
॥೬೪೦॥

ಹಗರಣವಾಡಿಸಿತ್ತು ಹರಿಯಂ ಹರನಂ ತಿರಿಸಿತ್ತು ಬೊಮ್ಮನಂ
ಮಗಳೊಡಗೂಡಿಸಿತ್ತು ರವಿಯಂ ನೆಲೆಗೊಂಡಿರಲೀಯದಿಂದ್ರನಂ ।
ನಗೆಗೆಡೆಮಾಡಿಸಿತ್ತು ಶಶಿಯಂ ಕಸದೊಳ್ ನೆರಪಿತ್ತು ತಮ್ಮ ಬ
ಲ್ಮೆಗೆ ಬೆರೆತಿಪ್ಪರಂ ವಿಧಿ ದಿಟಂ ಬಗೆಗೊಂಬುದೆ ಮರ್ತ್ಯರ್ಗಿತ್ಯರಂ ॥೬೪೧॥

ತಾಯಂ ಮಗನಿಂ ಕೊಲಿಸದೆ
ನೋಯಲ್ಕಟ್ಟಿಸದೆ ನೆಲಕಿ ನೆಲಕಿಲಬಲಿಯಂ ? ।
ಬಾಯಿಂ ಸ್ವೈರಪೊಸಪು
ಗ್ಗಾಯಿಲನಂ ಕೊಂದು ಕೂಗಿಸದೆ ಬಿದಿ ಸತತಂ ॥೬೪೨॥

ಗಿಡುವುಗಿಸಿತ್ತು ಪಾಂಡುಸುತರಂ ಯದುವಂಶವನೊರ್ವರೊರ್ವರಿಂ
ತಡಗೆಡಿಸಿತ್ತು ಶೂದ್ರಕನ ಪೆರ್ದಲೆಯಂ ಕುಜದೊಳ್ ತೊಡರ್ಚಿಸಿ ।
ತ್ತೆಡೆಗಿಡಿಸಿತ್ತನೇಕನೃಪಸಂತತಿಯಂ ಕಡುಕೆಯ್ದು ಮಿಕ್ಕರಂ
ಬಿಡುವುದೆ ಬಾತೆಗೆಟ್ಟ ವಿಧಿ ಬಲ್ಲದರಾವೆಡೆಯಲ್ಲಿ ಪೊಕ್ಕರಂ ॥೬೪೩॥

[1] ತ್ರತ್ಪುರಾಧೀಶ್ವರ.

ಯತಿಗಳ್ ಸಿ [ದ್ಧ] ರ್ ನಿತ್ಯ
ವ್ರತಿಗಳ್ ದೈವಜ್ಞರಾಗಮಜ್ಞರ್ ಧಾತ್ರೀ ।
ಪತಿಗಳ್ ಮಂತ್ರಜ್ಞರ್ ವಿಧಿ
ಗತಿಯುಂ ನಿಜಸತ್ತ್ವದಿಂದ ಕಳೆವವರೊಳರೇ ॥೭೪೪॥

ಸುರಪನೊಳಗಾದ ದಿಗಧೀ
ಶ್ವರರಂ ಬ್ರಹ್ಮಾದಿದೇವರಂ ಸಕಳಫಣಾ।
ಧರರಂ ಕಿನ್ನರರಂ ಮುನಿ
ವರರಂ ಬಿದಿ ಬಿಡದು ಮಿಕ್ಕರಂ ಬಿಟ್ಟಪುದೇ ॥೭೪೫॥

ದೇಹಕ್ಕನುಗುಣವಾಗಿರೆ
ಬಾಹುಕನೆಂಬಧಮನಾಮಮಂ ತಳೆದನಿಶಂ ।
ಸಾಹಸದಿಂ ಋತುಪರ್ಣನ
ಸಾಹಣಿಯಂ ಸಾರ್ದು ಸುಖದಿನಿರ್ದನಿಳೇಶಂ ॥೭೪೬॥

ವ॥ ಅಂತಿರ್ಪುದುಂ,

ಮುಂದುರದಾರ್ತೈಕೆಯನಾ
ತಂ ದಯೆಯಿಂದೀಯೆ ಬಾಹುಕಂ ಮೋಹದಿನೊ ।
ಲ್ದಿಂದುವೊದಲಾಗಿ ವಾಜಿಯ
ವೃಂದವನಾರೈವುತಿರ್ಪನಿರುಳುಂ ಪಗಲುಂ ॥೭೪೭॥

ತುರಗಾನೀಕದ ಮೆಯ್ಯನೊತ್ತಿಸುವ ನಿಚ್ಚಂ ಮೋಹನಾರೈವ ಗೋ
ವರನೆಲ್ಲಂ ಕೆಳೆಗೊಂಬ ನೀರ್ಗುಡಿವ ತಾಣಕ್ಕೀಱಿಕೊಂಡೊಯ್ವ ಮಂ ।
ದುರವಂ ಶೋಧಿಪ ವಾಜಿಮುಖ್ಯವ ಮನಂ ಮೆಚ್ಚಲ್ಕೆ ಮುಯ್ಯಾಂಪ ತ
ನ್ನಿರವಿಂಗಳ್ಕುವ ಚಿಂತೆಯಿಂ ನೆಲಸಿದಂ ಸೌಹಾರ್ದದಿಂ ಬಾಹುಕಂ ॥

ಕನಳವನೊಲ್ದು ಕೂಡಿಸುವ ರೋಗದವಂ ಪೊರೆಕ್ವೈವ ಶೈತ್ಯಪಾ
ನವನೊಳಗೀವ ವಸ್ಥಿಮುಖವಂ ಮಿಗೆ ಶೋಧಿಪ ಸೂಕಳಾಶ್ವಮಂ ।
ಜನಳಿಯನಿಕ್ಕಿಯೋಡಿಸುವ ವಾರುವವಂ ನಡೆಪಾಡಿಸಲ್ಕೆ ನೋ
ಡುವ ಮಱಿಗಳ್ಗೆ ಪಾಲನೆಱೆವುಜ್ಜುಗವಂ ತಳೆದಿರ್ಪನಾವಗಂ ॥೭೪೯॥

ಒಡವೆಯ ಮುಂದಣಿಂ ತೆಗೆದು ಕಟ್ಟಿದ ಬಲ್ಮಱಿಗಳ್ಗೆ ಚಾಟಿಯಂ
ಪಿಡಿವ ಕನಲ್ದು ನಂಟಿಸುವ ದುಷ್ಟತುರಂಗಚಯಕ್ಕೆ ಕಬ್ಬಿಯಂ ।

ತುಡಿಸುವ ಹೊನ್ನಹಲ್ಲಣದಿನೊಪ್ಪುವ ದರ್ಪದ ವಾರುವಂಗಳಂ
ನಡೆಸುವ ಸಂಭ್ರಮಕ್ಕೆ ನೆಲೆಯಾದನಪೂರ್ವದ ದೇಹಬಾಹುಕಂ ॥೬೫೦॥

ಇಲ್ಲಿಡು ಹೊನ್ನ ಹಲ್ಲಣವನೊಟ್ಟಿಲನಾನಿಸು ಹಕ್ಕರಕ್ಕೆಯಂ
ಬಲ್ಲೆಯವಂ ಬಯಲ್ಗೆ ತೆಗೆ ಜೋಡ ಸುರಕ್ಷಿತವಾಗಿ ಮಾಡು ಭೂ !
ವಲ್ಲಭನಾಂಪ ಸೀಸಕವನೋಸರಿಸುಜ್ಜ್ವಲಖಡ್ಗದೇಣುಗಳ್
ಪಲ್ಲಟವಾಗದಂತೊಱೆಗಳೊಳ್ ನಿಱಿಸೆಂದುಸಿರ್ವಂ ನಿರಂತರಂ ॥೬೫೧॥

ವ॥ ಇಂತಿರೆ,

ತುರಗಪರೀಕ್ಷೆಯೊಳ್ ತುರಗರಕ್ಷೆಯೊಳುಗ್ರತುರಂಗಶಿಕ್ಷೆಯೊಳ್
ಪರಿಣತನತ್ಯಪೂರ್ವಗುಣಿ ಬಾಹುಕನೊಳ್ಪಿದನೆಂಬ ವಾರ್ತೆ ತ ।
ತ್ಪುರದೊಳಗೆಲ್ಲಿಯುಂ ಪರೆ[1]ಯೆ ಕೇಳ್ದೊಲವಿಂ ಋತುಪರ್ಣಭೂಭುಜಂ
ಕರೆಸಿ ಶರೀರವಂ ಪದೆದು ನೋಡಿ ನಗುತ್ತುಡಲಿತ್ತನಾಕ್ಷಣಂ ॥೬೫೨॥

ವ॥ ಅಂತಾ ಮನ್ನಣೆಯಿಂ ಸುಖದಿನಿರ್ಪನ್ನೆಗಂ,

ಎಸೆವ ಪತಿವ್ರತಸ್ಥೆ ದಮಯಂತಿ ಮನಃಪ್ರಿಯನಂ ವಿಚಾರಿಸಲ್
ದೆಸೆದೆಸೆಗಳ್ಗೆ ಭೂಸುರರ ವೇಷದ ಚಾರರನಟ್ಟಲಲ್ಲಿಯೊ ।
ರ್ವ ಸದೃಶನೂರ್ಜಿತಪ್ರಬಲಬುದ್ಧಿಯಿನೊಪ್ಪುವಯೋಧಿಯಂ ನಿಜ
ಪ್ರಸರದಿನೆಯ್ದಿ ತತ್ತುರಗಶಾಲೆಯ ಬಾಗಿಲೊಳಿದ್ದನುದ್ಧತಂ ॥೬೫೩॥

ಪಲವಂದದ ವಾರ್ತೆಯನ
ಸ್ಖಲಿತವೆನಲ್ ಮೆಲ್ಪ ತಾಣವೆಂದೊಂದು ಮೃದು ।
ಸ್ಥಳಜಗತಿಯೊಳಿರ್ದಂ ನಡೆ
ದಲಸಿಕೆಯಂ ಕಳೆಯಲೆಂದು ಚಾರಂ ಧೀರಂ ॥೬೫೪॥

ವ॥ ಅಂತಿರ್ದು ತನ್ನೊಳಿಂತೆಂದಂ,

ಅಂಗವಿಹೀನನಾಟವಿಕನುತ್ತಮಸಾಹಸಿ ಲಜ್ಜೆಗೇಡಿ ದು
ಸ್ಸಂಗಿ ಕುರೂಪಿ ದುರ್ವ್ಯಸನಿ ಮದ್ಯಪಿ ಧೂರ್ತನನಾಥನಾವಗಂ ।
ಹೆಂಗೊಲೆಗಂಜದಂ ಪಿಸುಣನತ್ಯಧಮಂ ಪುಸಿಕಂ ಸಮಸ್ತರಂ
ಭಂಗಿಸುವಂ ಮನಂ ಬಯಿಸಿ ಸಾರ್ದೆಡೆಯಲ್ಲವೆ ವಾಜಿಮಂದುರಂ॥೬೫೫॥

ಪರದೇಶಿ ದುರ್ಜನಂ ದ್ಯೂ
ತರತಂ ದುಷ್ಕರ್ಮಿ ಬಂದಿಕಾಱಂ ಚೋರಂ!

---
[1] ಚೆ.

ನರಕಿಯತಿಪಾಪಿಯಲ್ಲದೆ
ತುರಂಗನಿಕರಕ್ಕೆ ಗೋಸರಪ್ಪರೆ ಸತತಂ ॥೭೫೭॥

ವ॥ ಅದಱಿಂದೇನಾನುಮೊಂದು ವಾರ್ತಾವಿಶೇಷಮಂ ಕೇಳಲಪ್ಪು
ದೆಂದಲ್ಲಿಪ್ಪುದುಂ,

ಅಲ್ಲಿಗೆ[ಯ]ದೃಚ್ಛೆಯಿಂ ಚಿ
ತ್ತೋಲ್ಲಾಸಂ ಜನಿಸಿ ಬಾಹುಕಂ ಬಂದು ಮುದಂ।
ಪಲ್ಲವಿಸೆ ದೂತನಂ ನೀ
ನೆಲ್ಲಿಂದೆಯ್ತಂದೆಯೆಂದು ಕೇಳಲ್ ಬಗೆದಂ ॥೭೫೭॥

ಎಲ್ಲಿಂದ ಬಂದೆ ನಿನ್ನಂ
ಬಲ್ಲವರಾರಾರುಮೊಳರೆ ಕಾರ್ಯಂ ನಿನಗೇ।
ನಿಲ್ಲಿ ತಿಳಿವಂತು ಪೇೞೆನ
ಗೆಲ್ಲವನೆಂದೊಲ್ದು ಬಾಹುಕಂ ಬೆಸಗೊಂಡಂ ॥೭೫೮॥

ವ॥ ಅಂತು ಬೆಸಗೊಳ್ವುದುಂ,

ಅಡವಿಯೊಳಾತ್ಮವಲ್ಲಭೆಯನೊರ್ವಳ ನಿದ್ರೆಗೆಯ್ಸಿ ತಾಂ
ನಡುವಿರುಳೆರ್ದು ಪೋದ ನಳನೆಂಬ ಮಹಾತ್ಮನದೆಲ್ಲಿ ಪೊಕ್ಕನೆಂ।
ದಡಿಗಡಿಗೆಯ್ದೆ ಚಿಂತಿಸಿ ವಿಚಾರಿಸಲಟ್ಟಿದಳೆನ್ನನಾತನಾ
ಮಡದಿ ಧರಿತ್ರಿಯಂ ತಿರಿಗಿಯೊಂದೆಡೆಗಾಣದೆ ಬಂದೆನೀಕ್ಷಣಂ ॥೭೫೯॥

ವ॥ ಅದಂ ಬಾಹುಕಂ ಕೇಳ್ದು,

ಈ ತೆಱದಿಂ ಕಳುಪುವುದು
ಸ್ವಾತಂತ್ರ್ಯದ ಸತಿಯರೊಳಗೆ ಧರೆಯೊಳೆನುತ್ತೊ।
ಲ್ದಾತಂ ಪೋದಂ ಪುರದಿಂ
ದೂತಂ ಪೊಱಮಟ್ಟು ಬಂದಬಟ್ಟೆಗೆ ನಡೆದಂ ॥೭೬೦॥

ವ॥ ಆತಂ ಕುಂಡಿನಪುರಕ್ಕೆ ಮಗುಟ್ದು ಬಂದು ದಮಯಂತಿಯಂ ಕಂಡು,

ಪ್ರಿಯದಿಂ ಕೇಳ್ ವಿಧುಮುಖಿಯಾ
ನಯೋಧಿಯಿಂ ಬಂದೆನಲ್ಲಿ ಪುಟ್ಟಿದ ನವವಾ।
ರ್ತೆಯದೊರ್ವ ಬಾಹುಕಂ ನೃಪ
ಹಯರಕ್ಷಕನೆಂದ ಮಾತು ಮತ್ಸನ್ನಿಧಿಯೊಳ್ ॥೭೬೧॥

ಕಾಂತನನಱಿಸಲ್ ಸ್ತ್ರೀ ಸ್ವಾ
ತಂತ್ರ್ಯದಿನಟ್ಟುವವರೊಳರೆಯೆಂದಾತಂ ಪೋ।
ದಂ ತತ್ಪುರದೊಳ್ ಮತ್ತೇ
ನುಂ ತಿಳಿಯದು ನಿನ್ನ ಪತಿಯ ನಿಜವೃತ್ತಾಂತಂ ॥೬೬೨॥

ವ॥ ಅದಲ್ಲದೆಯುಂ,

ಗಂಡನೆನಿಸನೀಕೆಯ ನಳಿ
ಗುಂಡಿನೊಳಸಪಸದಿ ಗಾರಣವನೆಸಗುವಳಂ।
ಕಂಡೆನೆನುತ್ತಂ ಭೀಷ್ಮಂ
ಭಂಡಣದೊಳ್ ಸಲೆ ಶಿಖಂಡಿಗಂಡಂತಿರ್ದಂ ॥೬೬೩॥

ವ॥ ಅದಂ ಕೇಳ್ದು ದಮಯಂತಿ ಕತಿಪಯದಿನವಂ ಕಳೆಯೆ,

ಅನುನಯದಿಂ ದಮಯಂತಿಗೆ
ಪುನಸ್ಸ್ವಯಂವರವನೆಸಗುವಂ ಭೀಮನೃಪಂ।
ಜನಪತಿಗಳ್ ಶೀಘ್ರತೆಯಿಂ
ತನತನಗೆಯ್ತರ್ಪುದಿರದೆ ನಾಳೆ ಮುಹೂರ್ತಂ ॥೬೬೪॥

ಎಂಬೀ ವಾರ್ತೆಯನೆಲ್ಲವ
ನಂಬುದರವದಿಂದಯೋಧಿಯೊಳ್ ಸಾಱಿ ಮಗು।
ೞ್ದಂಬಂ ಕಡುಪಿಂದೆಚ್ಚಪ
ರೆಂಬಂದದಿನಿಲ್ಲಿಗೊಲ್ದು ಬರ್ಪುದು ಬೇಗಂ ॥೬೬೫॥

ಎಂದೊರ್ವ ಪಾರ್ವನಂ ಪೇ
ೞೆಂದೊಲವಿಂ ಕಳುಪಿ ಭೀಮಸುತೆ ದೈವವದೇ।
ನಂದವನೆಸಗುವುದೋ ಮ
ನ್ನಂದನ ರತಿಭಾಗ್ಯವೆಂತುಟೋ ಎನುತಿರ್ದಳ್ ॥೬೬೬॥

ಅತ್ತಲಯೋಧಿಗೆ ಪಾರ್ವಂ
ಬಿತ್ತರದಿಂ ಪೋಗಿ ತತ್ಸ್ವಯಂವರವಿಲಸ।
ದ್ವೃತ್ತಾಂತಬೀಜವಂ ತವೆ
ಬಿತ್ತಿದನೆಲ್ಲರ್ಗೆ ಮನದ ಕೌತುಕವಾಗಲ್ ॥೬೬೭॥

ವ॥ ಅದಂ ಋತುಪರ್ಣಂ ಕೇಳ್ದು,

ನಾಳೆ ಮುಹೂರ್ತಕೆಯ್ದುವ
ಭಾಳಾಕ್ಷನದಾರ್ ಸಹಸ್ರಯೋಜನಪಥವಂ ।

ಕೇಳಲ್ಕಘಟಿತವೆಂದು ನೃ
ಪಾಳಂ ಚಿಂತಾಮಹಾಬ್ಧಿಯೊಳ್ ಮುೞುಗಿರ್ದಂ ॥೬೮॥

ವ॥ ತಚ್ಚಿಂತೆಯಿಂ ರಾಜವಾಹಕನಾದ ಮಂದುರಿಗಂ ತಾನುಂ ಚಿಂತೆಯಿಂ ಮಂದುರಕ್ಕೆ ವಂದಿರ್ದುದಂ ಬಾಹುಕಂ ಕಂಡು,

ಸಾಹಣಿಯ ಮುಖಂ ಚಿಂತಾ
ವ್ಯೂಹವನಾಂತಿರ್ಪುದೇಕೆನಲ್ಕೆಂದಂ ಕೇಳ್ ।
ಬಾಹುಕ ಮನ್ನೃಪತಿಯು [1]ಬೇ
ಳ್ವಾ[1]ಹೃದಯದ ಚಿಂತೆಯೆನ್ನ ಚಿಂತೆಯದಲ್ತೇ ॥೬೯॥

ವ॥ ಅದೆಂತೆನೆ,

ಅತುಳಪ್ರೀತಿಪುನಸ್ಸ್ವಯಂವರಮಹೋತ್ಸಾಹಂ ಗಡಂ ನಾಳೆ ಭೀ
ಮತನೂಜಾತೆಗೆ ಮದ್ಧರಾಧಿಪತಿ ತಾಂ ಪೋಪಂದವೆಂತೆಂಬುದಂ ।
ಸ್ಥಿತಚಿಂತಾಪರನಾಗಿ ಶೀಘ್ರಗತಿಯಿಂ ಸಾರಥ್ಯಮಂ ಮಾೞ್ಪ ಸ
ಮ್ಮತಿಯುಂಟಾದೊಡೆ ಬೇೞ್ಪ ರಾಜ್ಯಪದವಂ ಕೂರ್ತೀವೆನೆಂದಿರ್ದಪಂ ॥೭೦॥

ವ॥ ಆ ಮಾತಿಂಗೆ,

ನಳನೃಪತಿಗೆ ಮುನ್ನಂ ಕಂ
ಗೊಳೆ ಸಾರಥಿಯಾದ ಹೊಲಬನಱಿವೆಂ ನವಮಂ ।
ಗಳಸಮಯಕ್ಕವನಿಪನಂ
ಘಳಿಲನೆ ಕೊಂಡೊಯ್ವೆನಶ್ವಮಂ ಕೊಡಿಸೆಂದಂ ॥೭೧॥

ವ॥ ಆ ಮಾತಂ ಕೇಳ್ದು ರಾಜವಾಹಕಂ ಋತುಪರ್ಣನ ಸಮೀಪಕ್ಕೆ ಪೋಗಿ,

ಒಂದು ಶುಭವಾರ್ತೆಯಂ ಕೇಳ್
ಮಂದುರವಾರ್ತ್ಯೆಕೆಗಿರ್ದ ಬಾಹುಕನೆಂಬಂ ।
ಸ್ಯಂದನವನೆಸಗಿ ಮೆಚ್ಚಿಪೆ
ನೆಂದೆನ್ನೊಳ್ ಪೇೞ್ದು ಕುದುರೆಯಂ ಕುಡಿಸೆಂದಂ ॥೭೨॥

ರಥವಂ ರತ್ನಪಿನದ್ಧಚಕ್ರಯುಗಳಶ್ರೀರಮ್ಯಚಂಚನ್ಮನೋ
ರಥವಂ ಚೋದಿಸಲುರ್ವರಾಧಿಪ ಮಹೋತ್ಸಾಹಂ ಮಿಗಲ್ ನಿನ್ನ ಸಾ ।
ರಥಿಯಪ್ಪಂ ಕರೆ ಬಾಹುಕಂ ನಿಜಮಹೋದ್ವಾಹಪ್ರಯಾಣಕ್ಕೆ ಸ
ತ್ಪಥವಂ ಬಲ್ಲವನೆಂದು ಬಿನ್ನವಿಸಿದಂ ತನ್ಮಂದುರಾಧ್ಯಕ್ಷನಂ ॥೭೩॥

[1] ಚಿಲಾ.

ವ॥ ಮತ್ತಂ,

ಆತಂ ನಳನೃಪತಿಗೆ ಮು
ನ್ನೋತೆಸಗಿದನತುಳರಥವನೆಂದು ಮನಸ್ಸಂ |
ಪ್ರೀತಿಯನಾಗಿಸುತಿರ್ಪಂ
ಭೂತಳಪತಿ ಕರೆಸಿ ಕೊಡು ತುರಂಗವನೆರಡಂ ॥೬೭೪॥

ವ॥ ಎಂಬುದಂ ಬಾಹುಕನಂ ಕರೆಸಿ ತುರಂಗಮಮಂ ತೆಗೆಯೆನಲ್,

ಮಂದುರದೊಳ್ ಬಡವಾಗಿ
ರ್ದೊಂದೆರಡಂ ತುರಂಗವಂ ಗಥಕೆಂದಾತಂ |
ಮುಂದಿರಿಸಲ್ ಕಂಡವನಿಪ
ನೆಂದಂ ನಗೆಗೆಡೆಯಮಾಡಲೇಕಿಂತೆನ್ನಂ ॥೬೭೫॥

ಚಿತ್ತೈಸು ನೃಪತಿ ನಿನ್ನಯ
ಚಿತ್ತಕ್ಕಾಂ ಬರ್ಪ ತೆಱದೆ ನಾಳೆ ಮುಹೂರ್ತಾ |
ಯತ್ತಂ ತಪ್ಪದವೊಲ್ [1]ಪೇ
ಟು[1]ತ್ತಮಕುಂಡಿನಪುರಕ್ಕೆ ನಾಂ ತೆರಳಿಸುವೆಂ ॥೬೭೬॥

ವ॥ ಎಂದು,

ಕಡುಬಡವಾದೆರಟ್ಕುದುರೆಯಂಗವನೊಯ್ಯನೆ ತನ್ನ ಕೈಗಳಿಂ
ತೊಡೆಯಲೊಡಂ ಸಡಿಲ್ದ ತನು ಕೊರ್ಬಿ ಸಟಾಳಿ ನಿಮಿರ್ದು ಕಾಂತಿ ನೂ |
ರ್ಮಡಿಸಿ ಕೊನರ್ತು ರೋಮತತಿ ಭೀಷಣಹೇಷಿತದಿಂ ಖುರಾಗ್ರದೊಳ್
ಗುಡಿಗುಡಿಗಟ್ಟಿ ಸಂತತಮನೋತ್ಸವವಂ ತಳೆದಿರ್ದುದಾಕ್ಷಣಂ ॥೬೭೭॥

ವ॥ ಅದಂ ಕಂಡು ಕುತೂಹಳಚಿತ್ತನಾಗಿ ಋತುಪರ್ಣಂ ರಥವಂ ತರಿಸಿ,

ಸಂಕುಳರತ್ನದಿಂ ಪೊಳೆವ ಛತ್ರವೊ ಭೂವಧುವಿಟ್ಟ ಕರ್ಣತಾ
ಟಂಕವೊ ಹೇಮದಿಂ ಸಮೆದ ನೇಮಿಯೊ ಬಲ್ಪಿನ ಸೀಮೆಯೋ ಮಹಾ |
ಲಂಕೃತಿವೆತ್ತು ನುಣ್ಪೆಸೆವ ಕುಂ[2]ಭಗಳಂ[2] ದವೊ ವಜ್ರದಂಡವೋ
ಶಂಕೆಗಳುಂಬಮಾಯ್ತು ರಥವಭ್ಯುದಯಾವಸಥಂ ಮನೋರಥಂ ॥೬೭೮॥

ಉದಿತರವಿಪ್ರಭಾಸದೃಶನಿರ್ಮಳನೂತನರತ್ನಬದ್ಧಸಂ
ಪದರಥಸನ್ನಿವಿಷ್ಟತಪನೀಯ[ಕನದ್ಧ್ವ]ಜವೈಜಯಂತಿಕಾ |
ಭ್ಯುದಯವಳಂಕೆವೆತ್ತು ದೆಸೆಯಂ ಬೆಳಗಲ್ಕೆ ಚಕಚ್ಚಕೀಯಮಾ
ನದಿನೆಸೆದತ್ತು ತನ್ನೃಪವರೂಥವಯೋಧಿಪುರಾಗ್ರವೀಥಿಯೊಳ್ ॥೬೭೯॥

[1] ಪೆಲ್ವು. [2] ಬಳದಂ.

ದನುಜಾರಿಯಾಂತ ಚಕ್ರಮ
ನಿನರಥದೊಂದುಳ್ಳ ಚಕ್ರಮಮಂ ವಿಕ್ರಮದಿಂ ।
ಮುನಿದಿಟ್ಟು ಳಿಗೊಂಡಂದದಿ
ನನುಪಮ ಕಾಂತಿಯಿನದೇಂ ಮನಂಗೊಳಿಸಿದುದೋ
॥೬೮೦॥

ವ॥ ಅಂತಿರ್ದ ರಥವಂ ಬಾಹುಕಂ ಕಂಡು,

ಪಾಡಱಿದು ಕುದುರೆಯೆರಡಂ
ಹೂಡಿ ಬಟಿಕ್ಕವನಿಪತಿಯನೇಱಿಸಿ ರಥವಂ ।
ಕ್ರೀಡಿಸುವಂದದಿನೆಸಗಲ್
ತೀಡುವ ಬಿಱುಗಾಳಿಯಂತೆ ಪರಿದತ್ತು ರಥಂ ॥೬೮೧॥

ಸರಭಸದಿಂದೆರಟ್ಟು ಕುದುರೆಯುಂ ರಥಿ ಪೂಡಲೊಡಂ ನಿರಂತರಂ
ಶರಧಿತರಂಗದಂತೆ ಮಱಿಮಿಂಚಿನ ಮಿಂಚುವ ಗೊಂಚಲಂತೆ ಸು।
ಟ್ಟುರೆಯ ತೆರಳ್ಕೆಯಂತೆ ತೆರೆಗೊಂಡ ಮರೀಚಿ[ಕೆ]ಯಂತೆ ಕೂಡೆ ಸಂ
ಚರಿಸುವ ಮೇಘದಂತೆ ಕಡುಪಂ ಪ[1]ಡೆ[1]ದತ್ತು ರಥಪ್ರಕಂಪನಂ ॥೬೮೨॥

[2]ಪಿಡಿದಿರೆ ವಾ[2]ಘೆಯುಂ ಮಿಸುಪ ಚಮ್ಮಟಿಯುಂ ದನಿಗೆಯ್ದು ಬಾಹುಕಂ
ತುಡುಕಿದೊಡೆಚ್ಚ ಕೋಲ್ ಭರದಿನುಚ್ಚಳಿಸಿಟ್ಟೆಡೆ ದಾರಿಯಾದ ಪೇ ।
ರಡವಿಯ ಬೆಟ್ಟಗಳ್ ಜರಿದು ನುರ್ಗುವಿನಂ ಕಡುಕೆಯ್ದು ಪಾಯ್ದುದಿಂ
ಗಡಲ ತರಂಗದಂದದೆ ಮರುಜ್ಜವದಿಂ ರಥವಿಪ್ಪದಿಕ್ಪಥಂ ॥೬೮೩॥

ಸಾರಥಿಯಾಜ್ಞೆಯಿಂ ನೃಪತಿಯೇಱಲೊಡಂ ರಥಚಕ್ರಘೋರಚೀ
ತ್ಕಾರರವಂ ದಿಗಂತರವ ನಂದಿಸೆ ಹಿಂದುಟಿಯಲ್ ಮನೋಜವಂ ।
ನೀರದಮಾರ್ಗಮಂ ಕವಿಯಲೆರ್ದ ರಜಂ ಪರಿದತ್ತು ವಿಸ್ಮಯಾ
ಕಾರದಿನಾರ್ಪುವೆತ್ತ ನವರತ್ನರಥಂ ಕಮನೀಯವೇಗದಿಂ ॥೬೮೪॥

ಅತಿವೇಗಂ ಸೂರ್ಯನಿಂದೃಷ್ಟಿಯಗತಿಸತತಂ ಸೂರ್ಯನಿಂದೃಷ್ಟಿಯಿಂಮಾ
ರುತಮಾರ್ಗಂ ನಿತ್ಯತೀವ್ರಂ ವಿಮಳತರಲಸತ್ಸೂರ್ಯನಿಂ ದೃಷ್ಟಿಯಿಂಮಾ।
ರುತನಿಂದಂ ಚಿತ್ತಗಮ್ಯಸ್ಥಿತಿಬಗೆಯೆ ಮಿಗಿಲ್ಸೂರ್ಯನಿಂ ದೃಷ್ಟಿಯಿಂ ಮಾ
ರುತನಿಂ ತಚ್ಚಿತ್ತದಿಂ ಸ್ಯಂದನರಯವಧಿಕಂ ಹೃದ್ಯವತ್ಯಂತಚೋದ್ಯಂ॥೬೮೫॥

ಜಯಶೀಲಲೋಲತನ್ನೃಪ
ತಿಯ ರಥದೊಡಗೂಡಿಯೋಡಲಾಱದೆ ಬಟಿಯಂ ।

[1] ರ. [2] ಪಿಡಿದಳ್ವಾ.

ರಯದಿಂದೆ ಫಾಯು ಸೋಲ್ತಪ
ಜಯದಿಂ ಮೆಯ್ಗುಂದಿ ಮಂದಮಾರುತನಾದಂ ॥೬೮೬॥

ಖುರವಂ ಸಾಲಿಡುವಂತೀ
ಧರಣಿಯುನಳಿವಂತೆ ಕಡಲ ಕಡೆಯಂ ಕಾಣ್ಬಂ ।
ತುರವಣೆಯಿಂದುಚ್ಚಳಿಸುವ
ತುರಂಗಮಂ ಕೊಂಡು ಪಾಯ್ದನೂರಿಂ ತೇರಂ ॥೬೮೭॥

ಮನದಿಂ ಮುಂದುರುವಾಯ್ದು ಮತ್ತೆ ಬಗೆಯಿಂದತ್ತತ್ತ ಪೋಪಂತು ಸ್ಯೈ
ತನೆ ಚೆಂಬೊನ್ನರಥಂ ಜವಂ ಮಿಗುವಿನಂ ಪೋಗುತ್ತಿರಲ್ ತನ್ನರೇ ।
ಶನವುಷ್ಣೀಷವಳಂಕೆಯಿಂ ಸಡಿಲ್ದು ಬೀಳಲ್ ನೋಡಿ ಕೈನೀಡಿ ಯೋ
ಜನದಿನ್ನೂರನಡರ್ತು ಪಾಯ್ದುದು ರಥಂ ಮುಂದಣ್ಕೆ ಸಂರಂಭದಿಂ ॥

ಇಂತು ಮನೋಜವಂಬೆರಸು ರತ್ನರಥಂ ಕಡುಪಿಂ ಬರುತ್ತಿರಲ್
ಮುಂತೆಸದಿರ್ದುದುಚ್ಚಕಲಿವೃಕ್ಷವದಂ ನಡೆನೋಡಿ ತತ್ಕುಜ ।
ಪ್ರಾಂತದೊಳೊಯ್ಯನೊಂದಿನಿಸು ನಿಂದೆಲೆಯಿರ್ದಪವೇಸು ಲೆಕ್ಕದಿಂ
ದಂ ತೊದಳಿಲ್ಲೆನುತ್ತವನಿಪಂ ನಿಜಸಾರಥಿಗೊಲ್ದು ತೋಱಿದಂ ॥೬೮೯॥

ವ॥ ಅಂತು ತೋಱಿ,

ಇಲ್ಲಿಗಯೋಧಿಪಟ್ಟಣವೆನಿತ್ತೆನಲಷ್ಟಶತಾಧ್ವಯೋಜನಂ
ಮೆಲ್ಲನೆ ಬಂದೆವಲ್ತೆ ದಮಯಂತಿಯ ಕುಂಡಿನದಿಂ ಶತದ್ವಯಂ।
ತಲ್ಲಣವೇಕೆ ನಿನ್ನೆ ಪೊಱಮಟ್ಟಿನಿತಂ ನಡೆತಂದೆವೀಗಳಿಂ
ತಲ್ಲಿಗೆ ಸಾರ್ವೆವೆಂದು ನರಪಂಗುಸಿರ್ದಂ ಭರದಿಂದ ಬಾಹುಕಂ ॥೬೯೦॥

ಈ ತೇರಿಂದೀ ಕುದುರೆಯಿ
ನೇತೆಱದಿಂ [1]ಬಂದೆಯುಷ್ಟ[1]ಶತಯೋಜನಮಂ।
ಭೀತಿಯುದಿಲ್ಲದೆ ಪೇೞೆನ
ಲಾತಂ ಕೇಳಶ್ವಹೃದಯವೆನಗುಂಟೆಂದಂ ॥೬೯೧॥

ವ॥ ಅನಂತರಂ,

ಜನನಾಥಂ ಬಾಹುಕಂಗಾ ಕಲಿಕುಜದ ದಳಾನೀಕಮಂ ನೋಡಿ ಲೆಕ್ಕ
ಕ್ಕೆ ನಿತೆಂದಿರ್ದಂದು ಪೇೞಲ್ ಬೆಱಗುವಡೆದು ತದ್ಬಾಹುಕಂ ಸಂಖ್ಯೆಯಂ ಪೇ।
ಳ್ವನವೀನಂನಿನ್ನೊಳೆಂತಾಯ್ತು ದಱಿಹೃದಯವೇನೆಂದೆನಲ್ಕೂರ್ಮೆಯಿಂ[2]ದಾ[2]
ಯ್ತೆನಗಕ್ಷದ್ಯೂತಕೇಳೀಹೃದಯದ ಫಲವೆಂದಂ ಮನಃಪ್ರೀತಿಯಿಂದಂ ॥

[1] ಬಾದೆಯುಪ್ಪ. [2] ತಾ.

ನೀನಶ್ವಹೃದಯಮಂ ತಿಳಿ
ಪಾನಕ್ಷದ್ಯೂತಹೃದಯಮಂ ತಿಳುಪುವೆನೆಂ।
ದಾ ನೃಪತಿಯಕ್ಷಹೃದಯವ
ನಾನಂದದಿನಿತ್ತು ತುರಗಹೃದಯವನಱಿದಂ ॥೬೯೩॥

ಆ ಕಲಿ ವೃಕ್ಷದ ಕೆರ್ಚಿಂ
ಶ್ರೀಕರವೆನಿಪಕ್ಷಯುಗಳವಂ ಮಾಡಿ ಧರಿ।
ತ್ರೀಕಾಂತಂ ಪರಸಿತ್ತಂ
ಸ್ವೀಕರಿಸಿವನೆಂದು ಬಾಹುಕಂಗನುನಯದಿಂ ॥೬೯೪॥

ವ॥ ಆ ಸಮಯದೊಳ್,

ಋತುಪರ್ಣನಱಿಯದಂದದಿ
ನತಿಭೀಕರಕಲಿ ನಿಜಸ್ವರೂಪದಿನೆಲೆ ಭೂ।
ಪತಿಯಾಂ ನಿನ್ನಂ ಕಾಡಿದೆ
ನಿತರರ್ ಸೈರಿಪರೆ ಮದ್ವಿಘಾತಿಯನೆಂದಂ ॥೬೯೫॥

ಪಾತಕಕೋಟಿ ತನ್ನವಯವಂ ವಿತಥಾದಿಸಮಸ್ತದುರ್ಗುಣಂ
ಧಾತುಗಳೆಲ್ಲರಂ ಬಿಡದೆ ಪೀಡಿಸಿಕಾಡುವ ಮೂಢವೃತ್ತಿ ತ।
ಚ್ಚೇತನವಾಗಿ ಮೆಯ್ಪಡೆದು ಲೋಕಭಯಂಕರಮೂರ್ತಿವೆತ್ತು ಧಾ
ತ್ರೀತಳನಾಥನಿಂ ಕಲಿ ತೊಲಂಗಿ ಸಮಕ್ಷದೊಳಿರ್ದನಾಕ್ಷಣಂ ॥೬೯೬॥

ನಿನ್ನಯ ಧೈರ್ಯಮಂ ಬಹಳಸತ್ತ್ವಮನೀತೆಱದಿಂ ವಿಭಾವಿಸ
ಲ್ಕಿನ್ನೆವರಂ[1] ನಿಜಾಕೃತಿಯನಾವರಿಸಿರ್ದೆನಿದೊಂದುದೋಷಮಂ।
ಮನ್ನಿಸು ಪೂರ್ವರಾಜ್ಯಸುಖಸಿದ್ಧಿ ಮನೋರಮೆಯಂಗಸಂಗವ
ತ್ಯುನ್ನತಿವೊಂದುಗೆಂದು ನಳನಂ ಕಲಿ ನೆಟ್ಟನೆ ಬಿಟ್ಟನಾಕ್ಷಣಂ ॥೬೯೭॥

ವ॥ ಬಳಿಕಲ್ಲಿಂ ತೆರಳ್ದು,

ದಿನಕರಸೋಮವೀಥಿಗಳಿನಂಬರವಂ ಕಮನೀಯ ಭೋಗಿಜೀ
ವನದಿನದಬ್ಧಿಯಂ ವಿಪುಳಭಾಸುರವಾಸದಿನಿಂದ್ರಶೈಲವಂ।
ಘನತರಶೋಭೆಯಿಂ ಪಡೆದು ಪೋಲ್ತು ಜಗಂ ನುತಿವೆತ್ತ ಚೆಲ್ವ ಕುಂ
ಡಿನನಗರಕ್ಕೆ ಬಂದನನುರಾಗದಿನಾ ಋತಪರ್ಣಭೂಭುಜಂ ॥೬೯೮॥

ಜನಿತಪುನಸ್ಸ್ವಯಂವರದ ವಾರ್ತೆಯನಾಗಳೆ ಕೇಳ್ದು ದೈವವಿಂ
ದೆನಗನುಕೂಲವಾಯ್ತೆನುತ ಬಾಹುಕಚೋದಕನಿಂ ಸಹಸ್ರಯೋ।

[1] ಲ್ಕಿನ್ನರ.

ಜನವನದೊಂದಿರುಳ್ ಪರಿದು ಬಂದುದು ಶೀಘ್ರತೆಯಿಂದೆ ಚೆಲ್ವ ಕುಂ
ಡಿನನಗರಾಲಯಕ್ಕೆ ಋತಪರ್ಣನ ಪೊನ್ನ ರಥಂ ಮನೋರಥಂ ॥೬೯॥

ವ॥ ಆಗಳ್,

ಆಕಸ್ಮಿಕಮೊರ್ಬ ಧರಿ
ತ್ರೀಕಾಂತಂ ನಿನ್ನೆ ತನ್ನ ಪಟ್ಟಣದಿಂ ನಿ।
ನ್ನಾಕಾಂಕ್ಷೆಯಿನಿಲ್ಲಿಗೆ ಚೆ
ಲ್ವಾಕೃತಿಯಿಂ ಬಂದನೊರ್ವ ಸಾರಥಿಸಹಿತಂ ॥೭೦೦॥

ವ॥ ಎಂದೊರ್ವ ಕೆಳದಿ ಪೇಟ್ದು ಳದಲ್ಲದೆಯುಂ,

[1]ಕೆನ್ನಂ[1] ಸಹಸ್ರಯೋಜನ
ವೆನ್ನಂ ಸಾರಥಿಯದೆನ್ನ ವಶ್ವಂ ನೃಪನಿ ।
ನ್ನೆನ್ನಂ ರಥವೆನ್ನದೆನು
ತ್ತಂ ನಗರಜನೋಕ್ತಿ ಪರೆದುದೆಲ್ಲಾದೆಸೆಯೊಳ್ ॥೭೦೧॥

ರಯದಿಂ ಭೀಮಜೆಯ ಪುನ
ಸ್ಸ್ವಯಂವರಕ್ಕೆಂದು ಬಾಹುಕಂ ರಥಮಂ ವಿ ।
ಸ್ಮಯದಿಂ ಚೋದಿಸೆ ಕಾಂತಾ
ಪ್ರಿಯದಿಂ ಮತ್ಪುರವನೆಯ್ದಿದಂ ಋತುಪರ್ಣಂ ॥೭೦೨॥

ವ॥ ಅದಂ ದಮಯಂತಿ ಕೇಳ್ದು,

ಬಿಡುದಾಣವನೀಯಲ್ ನೃಪ
ನೊಡನೆಯದಾರ್ ಬಂದರೆಂದು ನೋಡಲ್ ನಡವು ।
ತ್ತೆಡೆಗೆಯ್ದೆಯುಂ ಕೇಳಲ್
ಪಡೆವಳನಂ ಕಳುಪಿದಳ್ ನಿತಂಬಿನಿ ಕಡುಪಿಂ ॥೭೦೩॥

ವ॥ ಅದೆಲ್ಲವಂ ಮಾಡಿ ಪಡೆವಳಂ ಮಗುಟ್ದು ಬಂದು,

ನಿನ್ನೆ ಪೊಱಮಟ್ಟಯೋಧ್ಯಿಯಿ
ನಿನ್ನೆವರಂ ಬಂದೆವಿಲ್ಲಿಗೆಡೆಗೆಯ್ಯದೆಯುಂ ।
ದೆನ್ನಂ ನೋಡಿಯುಸುರ್ದಂ
ಮುನ್ನಾಂ ಕಂಡಂದವಲ್ಲದತಿವಿದ್ರೂಪಂ ॥೭೦೪॥

ವ॥ ಅದಲ್ಲದೆಯುಂ,

ಶುಭತರಪುನಸ್ಸ್ವಯಂವರ
ವಿಭವಮುಹೂರ್ತಕ್ಕೆ ನಾಳೆ ಬರ್ಪುದು ಬೇಗಂ ।

[1] ತಂನ್ನೂ.

ಪ್ರಭುಗಳೆನಲ್ ಮಱುದಿವಸಂ
ರಥಸದಿನೆಯ್ತಂದನೊಲ್ದು ಋತುಪರ್ಣನೃಪಂ ॥೭೦೫॥

ವ॥ ಎಂದು ಪೇೞಲನಂತರಂ,

ವಿಕಸಿತಪದ್ಮನೇತ್ರೆ ದಮಯಂತಿ ಸಮಂತು ಬೞಲ್ದು ಬಂದ ಬಾ
ಹುಕಋತುಪರ್ಣರೆಂಬವರ್ಗೆ ಭೋಜನವೀಕ್ಷಣವಾಗಲೆಂದು ಮುಂ ।
ಸಕಲಪದಾರ್ಥಮಂ ಶಿಖಿಜಲಂ ಪೊಱಗಾಗಿ ಲಸದ್ವಿಳಾಸಿನೀ
ನಿಕರದ ಕಯ್ಯೊಳಟ್ಟಿದಳದೇಂ ಮತಿವಂತೆಯೊ ದೀರ್ಘದರ್ಶಿಯೋ॥೭೦೬॥

ಅಡುಗೆಯನೆಸಗುವತನವಂ
ಮಡಕೆಗಳಂ ತೊಳೆವನಾವ ನೀರಿಂ ಕಿಚ್ಚಾ ।
ವೆಡೆಯಿಂ ಬಂದಪುದೆಂಬುದ
ನಡಗಿರ್ದಱಿಯೆಂದದೊರ್ವಳಂ ನಿಯಮಿಸಿದಳ್ ॥೭೦೭

ನ॥ ಅಂತು ಕಳಿಪನಳದೆಲ್ಲವಂ ನೋಡಿವಂದು,

ಯುವತೀ ಕೇಳ್ ಪೊಸತಂ ವಿಭಾವನೆ ಪದಂ ಬಂಧಂ ರಸಂ ರೀತಿ ಪ
ಕವಿಶೇಷಂ ನಯಮಾರ್ದವಂ ವಿಧುಲಸದ್ವರ್ಣಂ ಕ್ರಿಯಾಕೌಶಲಾ ।
ದಿವಿವೇಕಂ ಪುದಿದಿರ್ಪ ವಿಸ್ಮಯಮನೀಗಳ್ ಕಂಡೆನಾಂ ಭಾವಿಸಲ್
ಕವಿತಾಪ್ರೌಢಿಯೊ ಪಾಕರೂಢಿಯೊ ದಿಟಂ ಪೇೞ್ವಂದೆನಾನಂದದಿಂ॥೭೦೮

ವ॥ ಅದೆಂತೆನೆ,

ಬೆಸಳಿಗೆಯೊಳ್ ತರಂಬಡೆಯೆ ಶಾಕಚಯಂಗಳನಿಕ್ಕಿ ಸೈಂಧವಂ
ಪೊಸಮೆಣಸಿಂಗು ಜೀರಗೆ ಪದಂಬಡೆಯಲ್ ತಳಿದೆಲ್ಲವಂ ನಿರೀ ।
ಕ್ಷಿಸಲಮೃತೋಪಮಾನನಳಪಾಕಮಪಾಕಮವಾಗಿಯಾ ಮಹಾ
ನಸದೊಳಗನ್ನವಾಯ್ತು ಶಿಖಿವಾರಿಯ ಪೊರ್ದುಗೆ ಪೊರ್ದದಾಕ್ಷಣಂ॥೭೦೯॥

ವಾರೀಂಧನಶಿಖಿಯೆಂಬವ
ನಾರಾರುಂ ಕಂಡರಿಲ್ಲ ಸಕಲಪದಾರ್ಥಾ ।
ಕಾರಂ ಬಾಹುಕನಾಗಿಸ
ಲೋರಣದಿಂ ಪಾಕವಾದವತಿಶೀಘ್ರತೆಯಿಂ ॥೭೧೦॥

ಋತುಪರ್ಣಂ ಪಸಿದನೆನು
ತ್ತತಿಶೀಘ್ರದಿನೊಲ್ದು ಮಾಡಿದಂ ಪೆಂಪಿಂದಾ ।

ಯತವಾಗಲ್ ನಳಪಾಕವ
ನಿತರರ್ ಶಿಖಿವಾರಿಯಿಲ್ಲದಿಂತೆಸಗುವರೇ ॥೭೧೧॥

ವ॥ ಎಂದು ಪೇಟಲ್ಕಿವೆಲ್ಲವಂ ತರಲ್ ಕಳಿಪೆ,

ನಿನ್ನಯ ಹಸ್ತಕೌಶಲವನೀಕ್ಷಿಪಳಾ ದಮಯಂತಿ ಶಾಕಪಾ
ಕಾನ್ನವನೀವುದೆಂದೆಸೆವ ಬಾಹುಕನಿಂದವನೀಸಿಕೊಂಡು ತ ।
ತ್ಸನ್ನಿಧಿಗೆಯ್ದಿ ತೋಱಿಸಲದೊರ್ವ ವಿದಗ್ಧ ತದೀಯದಿವ್ಯಗಂ
ಧಂ ನೆಲಸಿತ್ತು ನಾಲ್ದೆಸೆಯೊಳೇನೊಗಟ್ವೆಂ ನಳಶಾಕಪಾಕವಂ ॥೭೧೨॥

ಆ ಪಾಕವಿಶೇಷಂ ನಳ
ಭೂಪತಿಯಿಂದಾದುದಲ್ಲದಿತರರೊಳಿಲ್ಲೆಂ ।
ದಾ ಪದ್ಮನೇತ್ರೆ ಹೃತ್ಪರಿ
ತಾಪವನಿಟಿಕೆಯ್ದು ಪುತ್ರರಂ ಕರೆಯೆಂದಳ್ ॥೭೧೩॥

ನಳನೃಪತಿಯ ತದ್ರೂಪಂ
ತಳೆದಿರ್ಪರ್ಸುತರನೊಲ್ದು ದಾದಿಯ ಬೆನ್ನೊಳ್ ।
ಕಳುಪಿದಳಲ್ಲಿಗೆ ಮಾನಿನಿ
ತಿಳಿವಂದದಿನಾತ್ಮಜಾತಮೋಹಸ್ಥಿತಿಯಂ ॥೭೧೪॥

ವ॥ ಅಂತು ಕಳುಪಲ್,

ಕನ್ನಡಿಯೊಳ್ ತನ್ನಯ ರೂ
ಪಂ ನೋಟ್ಪವೊಲಾತ್ಮಜಾತರಿರ್ಪರನತ್ಯು ।
ತ್ಪನ್ನಮತಿ ಕಾಣ್ಬುದುಂ ಹ
ರ್ಷೋನ್ನತಿಯಿಂ ಮುಖವಿಕಾಸವಾದತ್ತಾಗಳ್ ॥೭೧೫॥

ಲೋಚನದೊಳ್ ಮುದಶ್ರು ತಲೆದೋಱೆ ಮನೋಮುದವಂ ಮುಖಾಂಬುಜಂ
ಸೂಚಿಸೆ ದೋರ್ಯುಗಂ ಸ್ಫುರಿಸೆ ತನ್ನಪರಾಧದಳುರ್ಕೆ ಚಿತ್ತವಂ ।
ನಾಚಿಸೆ ಪೂರ್ವದುಸ್ಸ್ಥಿತಿ ನಿಜಾಂಗಮಲೀಮಸವೃತ್ತಿಯೆಯ್ದೆ ಸಂ
ಕೋಚಿಸೆ ನೋಡಿದಂ ನೃಪಕುಮಾರರನುತ್ಸವದಿಂದ ಬಾಹುಕಂ ॥೭೧೬॥

ವ॥ ಅಂತು ನೋಡಿ,

ಅತಿಶಯಸೌಖ್ಯವನಿಹದೊಳ್
ಗತಿಯಂ ಪರಲೋಕದೊಳ್ ಸಮಂತೀವ ಮಹೋ ।

ನ್ನತಕುಲಸಂಭವರೆನಿಸುವ
ಸುತರನಗಲ್ದೆಂತು ನಿಲ್ವರೋ ಕಲ್ಲೆರ್ದೆಗಳ್ ‖೭೧೭‖

ವ‖ ಎಂದು ಮಗುಳ್ದು ಸುರದಿರಲ್ ಕುಮಾರಕರ್ವೆರಸು ದಾದಿ ಬಂದು,

ಕಂಡಱಿವಂತೆ ಮುನ್ನಱಿವರಂ ನಲಿದೀಕ್ಷಿಸುವಂತೆ ಕಣ್ಣ ನೀರ್
ಮಂಡಲಿಪಂತೆ ತನ್ನ ಸುತರಂ ನೆಸೆವಂತೆ ನೊಸಲ್ ನೊಸಲ್ಗಳೊಳ್ ।
ಮುಂಡಿಡುವಂತೆ ನುಣ್ಗೊಡೆಯನೇಱಿಸುವಂತಮರ್ದಪ್ಪುವಂತೆ ಮೆ
ಯ್ಯಂ ಢಗೆ ಪತ್ತಿದಂತಡರೆ ನೋಡಿದನಿರ್ದರನಾತನರ್ತಿಯಿಂ ‖೭೧೮‖

ವ‖ ಅನಂತರಂ,

ಈ ತೆಱದ ಕುಮಾರರ ಸಂ
ಪ್ರೀತಿಯನುರ್ಚಿದಿರ್ಪನಾವಕಲ್ಲೆರ್ದೆಯೋ ಎಂ ।
ದಾತಂ ಸುಯ್ಯನೆ ಸುಯ್ದಂ
ಮಾತಂ ಮತ್ತೇನನಾಡದಿರಲಾಂ ಬಂದೆಂ ‖೭೧೯‖

ವ‖ ಎಂದು ದಾದಿ ಪೇಳ್ವುದುಂ,

ಎನಗಾಯಿತ್ತೆಂದುಮಭೀಷ್ಟದೈವದ ವರಂ ಹೃತ್ಸಂಶಯಂ ಪಿಂಗಿದ
ತ್ತನುಕೂಲಗ್ರಹಮೊಂದುಗೂಡಿದಪನುತ್ಸಾಹದಿಂ ಸಂತತಂ।
ಮನದೊಳ್ ಬಲ್ಗಿಡಿಗಟ್ಟಿ ತನ್ನ ಪತಿಯಂ ನಿಶ್ಚೈಸಿ ತದ್ಧೀಮನಂ
ದನೆ ಪೆಂಪಿಂದೆ ಬಟಿಕ್ಕಲಂಕರಿಸಿದಳ್ ಸ್ವರ್ಣಪ್ರಭಾಪೀಠಮಂ ‖೭೨೦‖

ಕಾಣಲ್ವೇಳ್ಪುದು ತನ್ನನೆನ್ನ ಮನದಿಷ್ಟಂ ಶಾಕಪಾಕಂ ಮಮ
ಪ್ರಾಣಂಬೆತ್ತುದು ಮದ್ಗೃಹಕ್ಕೆ ಭರದಿಂದೆಟ್ಪ್ಪುದೆಂದಾಕೆ ಗೀ ।
ರ್ವಾಣಸ್ತ್ರೀಸಮವಾರನಾರಿಯುರನಾತಂಗಟ್ಟಿದಳ್ ಸಂತತಂ
ಕ್ಷೋಣೀಪ್ರಸ್ತುತರೂಪವಂತೆ ದಮಯಂತೀಕಾಂತೆ ಸಂತೋಷದಿಂ‖೭೨೧‖

ತೆಱಪಱಿದಾ ಋತುಪರ್ಣಂ
ಗಱಿಪದೆ ವಾರಾಂಗನಾನಿವೇದಿತನಾಗಲ್ ।
ಪೊಱಮಟ್ಟು ಬಂದನೆಲ್ಲ
ರ್ಬೆಱಗಾಗಲ್ ಸತಿಯ ಮನೆಗೆ ಬಾಹುಕನೊಲವಿಂ‖೭೨೨‖

ಮಸಕಂಗುಂದಿದ ನೋಟವಿರ್ಪಟಿದ ವಸ್ತ್ರಂ ಶೀರ್ಣಕೇಶಂ ಮಲೀ
ಮಸದೇಹಂ ಕಿಱುಗಂಟುಗಟ್ಟಿದ ಬೆರಲ್ ಕೊಂಕಿರ್ದ ಕರ್ಣದ್ವಯಂ ।

ಕುಸಿದುರ್ಬಿರ್ದ ಪೆಗಲ್ ಪಿಸುಟ್ದ ಚರಣಂ ಸಂಭಿನ್ನಪಾರ್ಷ್ಣಿಸ್ಥಳಂ
ವಸುಧಾಧೀಶನೊಳೊಂದಿರಲ್ ಸುದತಿ ಕಂಡಳ್ ಬಾಷ್ಪನೇತ್ರಂಗಳಿಂ
॥೭೩॥

ಹರನ ಲಲಾಟಲೋಚನದ ಕರ್ಬೊಗೆ ಪರ್ಬಿದ ಶಂಬರಾರಿಯೋ
ಸುರರಮೃತಾಬ್ಧಿಯಂ ಮಥಿಸಲೆರ್ದ ವಿಷಾರ್ಚಿಯನಾಂತ ರುದ್ರನೋ ।
ತರಣಿತನೂಜನೊಳ್ ಪೊಣರ್ದ ಮುಷ್ಟಿಯ ಘಟ್ಟಣೆಯಾಂತ ಕೃಷ್ಣನೋ
ಪರಿಕಿಪನಾವನಾರ್ತು ಕಲಿಪೊರ್ದಿದ ನೈಷಧಚಕ್ರವರ್ತಿಯಂ ॥೭೪॥

ಬಾಹುಕನೆಂಬುದ ತೋಱಿದೆ
ಮೋಹರಸಂ ಮೇರೆದಪ್ಪಿ ಪರಿವೃತ್ತಿರಲಿ ।
ನ್ನೇ ಹರಿಯಲ್ ನಟಿಸುವ ನೃಪ
ಸಾಹಸವಂ ಬಿಟ್ಟು ಮುಳಿಯದುಟುಹುವುದೆನ್ನಂ ॥೭೫॥

ವ॥ ಎಂಬುದುಂ,

ಫಣಿಪತಿಯಿತ್ತಂಬರವಂ
ಕ್ಷಣದಿಂ ತೆಗೆದುಟ್ಟು ಹೊದ್ದು ಕುಳ್ಳಿರ್ದ ನೃಪಾ ।
ಗ್ರಣಿ ಮುದದಿಂ ಪೋಲ್ತಂ ಮೂ
ಡಣಗಿರಿಯೊಳ್ ಮೂಡುವುದಯಕಾಲದ ರವಿಯಂ ॥೭೬॥

ಮೋಡವಗಲ್ದ ಚಂಡಕರನಂತುಪರಾಗವಗಲ್ದ ಕಾಂತಿಯಿಂ
ಮೂಡಿದ ಚಂದ್ರನಂತೆ ಹಿಮಕಾಲವಗಲ್ದ ವಸಂತನಂತೆ ಹೃ ।
ತ್ಪೀಡೆಯಗಲ್ದ ಯೋಗಿವರನಂತೆ ವಿರೂಪವಗಲ್ದ ಕೂರ್ಮೆ ಕೈ
ಗೂಡಿ ಮನೋಹರಾಕೃತಿಯೊಳಿರ್ದನತಿದ್ಯುತಿಯಿಂದಿಳಾಧಿಪಂ ॥೭೭॥

ಧೂಮಂ[1]ಪಿಂ[1]ಗಿದ ಶಿಖಿಯಂ
ತಾಮಯದಿಂ ಪಿಂಗಿದಿಂದುಕಳೆಯಂತಖಿಳ ।
ವ್ಯಾಮೋಹಂಪಿಂಗಿದ ಯೋ
ಗಾಮೃತನಿಧಿಯಂತೆ ತೊಳಗಿದಂ ಭೂಪಾಲಂ ॥೭೮॥

ನಯನಯುಗಂ ತೞತ್ತಳಿಸೆ ದಂತಮರೀಚಿ ಲಸತ್ಕಪೋಳಭಿ
ತ್ತಿಯನವಳಂಬಿಸಲ್ ತನುಶಲಾಕೆ ರವಿಪ್ರಭೆಯಂ ನಿವಾರಿಸಲ್ ।
ಪ್ರಿಯರಸವಂ ತುಳುಂಕೆ ಮುಖಮುಜ್ಜ್ವಲಿಸಲ್ ಸಮುದಾಯಶೋಭೆ ಮೂ
ರ್ತಿಯನನುರಾಗದಿಂ ತಳೆದು ರಂಜಿಸಿದಂ ನಿಷಧಾಧಿನಾಯಕಂ ॥೭೯॥

---

[1] ಪೊ.

ಭೋಂಕೆನೆ ಕಂಡು ಕಾಂತೆ ನಳಭೂಪತಿಯಂಘ್ರಿಯಮೇಲೆ ಬಿರ್ದು ತ
ನ್ನಂಕದೊಳಿಟ್ಟು ನಂದನರನೀತೆಱದಿಂ ಮಱೆದಿರ್ಪರೇ ಮನ ।
ಶ್ಶಂಕೆಯಿನಿಂತು ಪೇೞ್ ಭುವನವಲ್ಲಭ ವಲ್ಲಭೆಯೆಂದು ಸಂತತಂ
ಪಂಕಜನೇತ್ರೆ ಕಣ್ಬನಿಗಳಿಂ ತೊಳೆದಳ್ ಪತಿಪಾದಪದ್ಮಮಂ ॥೭೩೦॥

ನಯನಾಂಬುಜಮಧುಕಣರಾ
ಜಿಯೆಂಬ ತೆಱನಾದ ತೋರಕಣ್ಬನಿಯಿಂ ಕಾಂ ।
ತೆಯ ಚಿಂತಾಕರ್ದಮವದು
ಮಯತ್ನದಿಂ ಪೋದುದೆಂಬುದೊಂದಚ್ಚರಿಯೇ ॥೭೩೧॥

ನಿರವಧಿಯ ಬಾಷ್ಪಜಲವಂ
ನಿರಂತರಂ ಸುರಿದು ಕೆಂಕಮಾದುದಱಿಂ ತ ।
ತ್ತರುಣಿಯ ನಯನಂ ರಕ್ತಾಂ
ಬುರುಹಕ್ಕೆಣೆಯಾದುದೆಂಬುದೇಂ ಸಂದೆಯಮೇ ॥೭೩೨॥

ವ॥ ಅನಂತರಂ,

ವಾರಿಜಪತ್ರನೇತ್ರೆ ದಮಯಂತಿಯ ಪೂರ್ಣಕಟಾಕ್ಷವಾಕ್ಸುಧಾ
ಸಾರದಿನಾತ್ಮವಲ್ಲಭನ ದೇಹವನಾವರಿಸಿರ್ದ ದುರ್ವಿಷಂ ।
ಗಾರುಡಮಂತ್ರದಿಂ ಪರಿವವೊಲ್ ಪರಿಯಲ್ ತನುಕಾಂತಿಯಿಂ ನಿಜಾ
ಕಾರವದೇಂ ಬೆಡಂಗುವಡೆದಿರ್ದುದೊ ತತ್ಕ್ಷಣದೊಳ್ ನೃಪಾಲನಾ॥೭೩೩॥

ವ॥ ಅಂತಿರ್ದ ನಳಚಕ್ರವರ್ತಿ ತನ್ನ ಮನೋರಮೆಯಂ ನೋೞ್ಪಾಗಳ್,

ಮೊದಲೊಳ್ ಕಟ್ಟಿದ ಮಂಡೆಯುಟ್ಟುಡಿಗೆಯಿಟ್ಟಿರ್ದೋಲೆ ಮೆಯ್ಗಂಪನಿ
ಕ್ಕಿದ ಗಂಧಂ ತೊಡೆದಿರ್ದಲಕ್ತಕರಸಂ ಮಿಂಚಿಟ್ಟ ದಂತಾಳಿ ತಿ ।
ರ್ದಿದ ನುಣ್ಬುಯ್ತಲೆ ಲೀಲೆಯಿಂ ಸವಿದ ತಾಂಬೂಲಂಜಲಂ ಮಿಂದುದ
ಲ್ಲದೆ ಮತ್ತೇನುವನೊಲ್ಲದಿರ್ದಬಲೆ ಚಿತ್ರಾಕಾರದಿಂ ತೋಱಿದಳ್ ॥೭೩೪॥

ಮಾಸಿದ ಸೀರೆಯೋಸರಿಸಿದಾಭರಣಂ ನಿಸದಂ ಬೆಳರ್ತಬಾಯ್
ಸೂಸಿದ ಕುಂತಳಾಳಿ ಜಡೆಗಟ್ಟಿದ ವೇಣಿ ಮನೋವಿಷಾದದಿಂ ।
ದೂಸರವಾದ ತನ್ನ ತನು ಬಾಡಿದ ವಕ್ತ್ರವಿನಿತ್ತು ಚಿತ್ತದಿಂ
ತಾಪತಿ ಮಾಣಿಕಂಬಡೆದ ಚಂದವೊ ಮೇಣ್ ದಮಯಂತಿಯಂದವೋ
॥೭೩೫॥

ವ॥ ಅನಂತರಂ,

ದಿನಕರನುನ್ನತದ್ಯುತಿಗೆ ಪದ್ಮಿನಿ ಚೈತ್ರಮಹೋತ್ಸವಕ್ಕೆ ನಂ
ದನವನಲಕ್ಷ್ಮಿ ನಿರ್ಮಲಶರತ್ಸಮಯಕ್ಕೆ ಮರಾಳಿ ನೀರದ ।
ಧ್ವನಿಗೆ ಮಯೂರಿ ಸಂತತಮಹೋತ್ಸವದಿಂ ಪೊರೆಯೇಱುವಂತೆ ತ
ನ್ನಿನಿಯನ ಕಾಣ್ಕೆಯಿಂ ಸುದತಿ ನೂತನಕಾಂತಿಯನಾಂತು ದೊಪ್ಪದೇ ॥

ಬಿಡದೆಡರಾದ ದಂಪತಿಗೆ ದುಸ್ಸ್ಥಿತಿಯಾದೊಡಮನ್ಯಚಿತ್ತವಾ
ದೊಡಮಳಿಪಾದೊಡಂ ನಿಜಮತಿಭ್ರಮೆಯಾದೊಡಮುಗ್ರಪೀಡೆಯಾ ।
ದೊಡಮಟಲಾದೊಡಂ ಮಹಿಮೆ ಕುಂದಿದೊಡಂ ಸಲೆ ಕಾಂತಭಕ್ತಿಯಂ
ಬಿಡುವರೆ ಸತ್ಕುಲೀನಸತಿಯರ್ ದಮಯಂತಿ [1]ಪರೀಕ್ಷ್ಯಳಲ್ಲವೇ[1] ॥೭೩೭॥

ವ॥ ಎಂದು ಜನಮನಃಪರಿಣಾಮಮಂ ತನಿವೆರ್ಚಲ್ ಬೞಿಯಂ,

ಪ್ರಿಯೆಯ ಮನೋಹರೋಜ್ಜ್ವಲವಿಲೋಚನಚಂಪಕಮಾಲೆ ದಂತಕಾಂ
ತಿಯ ನವಕುಂದಮಾಲೆ ನಖರಾಂಶುಸಿತೋತ್ಪಲಮಾಲೆ ದೇಹದೀ ।
ಪ್ತಿಯ ವಿಲಸತ್ಕಿರೀಷವನಮಾಲೆ ನೃಪಾಲನ ಹೃನ್ಮಧುವ್ರತ
ಪ್ರಿಯವನೊಡರ್ಚೆ ಮುನ್ನಿನದಱಿಂ ಮಿಗಿಲಾಯ್ತು ಪುನಸ್ಸ್ವಯಂವರಂ ॥

ಹರಿಪೀಠಂ ಪಸೆ ಶುದ್ಧಬುದ್ಧಿ ಜನಕಂ ಕಲ್ಯಾಣಗೇಹಂ ಮನಂ
ತರಳಾಪಾಂಗಮರೀಚಿಮಾಲೆ ಸಖಿಸಂದೋಹಂ ಸಮಸ್ತೇಂದ್ರಿಯಂ ।
ಪರಿಣಾಮಂ ನವರತ್ನಭೂಷಣಚಯಂ ಮೌಹೂರ್ತಿಕಂ ಚಿತ್ತವಾ
ಗಿರಲೊಪ್ಪಿತ್ತು ಪುನಸ್ಸ್ವಯಂವರಮಹೋತ್ಸಾಹಂ ಸರೋಜಾಕ್ಷಿಯಾ ॥

ತನುಕಾರ್ಶ್ಯಂ ತನುಮಧ್ಯಮಂ ವಿಪುಳಹೃಚ್ಚಿಂತಾಭರಂ ಕರ್ಕಶ
ಸ್ತನಮಂ ಲೋಚನಮಾಂದ್ಯಮಂಘ್ರಿಗತಿಯಂ ಚಂಚದ್ವಪುಃಕಾಳಿಮಂ ।
ಘನನೀಳಾಳಕಮಂ ಸಮಂತು ಕೆಳೆಗೊಂಡೊಪ್ಪಿಪ್ಪಿನಂ ಪಂಕಜಾ
ನನೆಯಂ ಕಾಂತಿಯನಾಂತು ರಂಜಿಸಿದಳೋ ವೈದರ್ಭೆ ಸಂರಂಭದಿಂ ॥

ದಯೆ ಧರ್ಮಂ ಧೃತಿ ವಿಕ್ರಮಂ ಕಳೆ ಗುಣಂ ಸದ್ವಿದ್ಯೆ ಸೌಜನ್ಯವ
ನ್ವಯಮಾಚಾರ ಪರೀಕ್ಷೆ ಶಾಂತಿ ತಪಮುದ್ಯೋಗಂ ಸಮಸ್ತಾಗಮಂ ।
ಕ್ರಿಯೆ ಪೆಂಪಿಂದೊಡಗೂಡುವಂತೆ ನಳಪೃಥ್ವೀವಲ್ಲಭಂ ತನ್ಮನಃ
ಪ್ರಿಯೆಯೊಳ್ ಕೂಡಿದನಾತ್ಮಪುಣ್ಯಫಲದಿಂ ಲೋಕತ್ರಯಂ ಬಣ್ಣಿಸಲ್ ॥

ಸತತಂ ದುಗ್ಧಾಬ್ಧಿವೀಚೀನಿಚಯದ ತೆಱದಿಂ ಮೇಲೆಮೇಲೆಯ್ದೆ ಭೀಮ
ಕ್ಷಿತಿಪಂಗುತ್ಸಾಹವಾರ್ತಾಸರಣಿಯನರೆಬರ್ ವಾರನಾರೀಜನಂ ಶೀ ।

[1] ಕ್ಷೆಯಲ್ಲಳೆ

ಘ್ರುತೆಯಿಂ ಪೇೞಲ್ ಮನೋರಾಗದ ಬೆಳವಿಗೆಯಿಂ ಸಂತತಂ ಪ್ರೀತಿಯಿಂ ತ
ತ್ಸುತೆಯುದ್ಯದ್ಬುದ್ಧಿಯಂ ವರ್ಣಿಸುತನುನಯದಿಂ ಬಂದನಾ ಭೂತಳೇಶಂ॥

ವಿಮಳಾಚ್ಛಾದನಮುಂ ಲಸನ್ಮಣಿಮಯಾಲಂಕಾರಮುಂ ಯಕ್ಷಕ
ರ್ದಮಮುಂ ದಿವ್ಯಸುಗಂಧಮಾಲ್ಯಚಯಮುಂ ತಾಂಬೂಲಮುಂ ಪಾತ್ರದಿಂ।
ರಮಣೀಸಂತತಿಯಾಂತು ತನ್ನೊಡವರಲ್ ಬಂದಂ ಕರಂ ನೋೞ್ಪ ಸಂ
ಭ್ರಮದಿಂ ನೈಷಧಭೂಪನಂ ತನುಜೆಯಂ ವೈದರ್ಭಭೂಪಾಲಕಂ ॥೭೪೩॥

ವ॥ ಅಂತು ವಿದರ್ಭರಾಜಂ ಬಂದು ಜಾಮಾತೃವನಲಂಕರಿಸಿ ತದ್ವೃತ್ತಾಂತಮುಂ ಕೇಳ್ವಾಗಳ್,

ಮೃಗಮದಪಂಕದಿಂ ತಿಲಕಮಂಜರಿ ಚಿತ್ರತಮಾಲಪತ್ರ[1]ವ[1]
ಲ್ಲಿಗಳನಳಂಕೆವೆತ್ತವಯವಂಗಳೊಳಾಂತು [2]ನವ[2]ಪ್ರಸೂನಮಂ ।
ಮಗಮಗಿಪಂದದಿಂ ತುಱುಬಿ ಬಂದಳಿವಲ್ತೆ ಸಮಸ್ತವನ್ಯವ
ಸ್ತುಗಳೆನಗಾದುವೆಂದು ನಿಜವಲ್ಲಭನಂ ತಲೆವಾಗಿಪಂದದಿಂ ॥೭೪೪॥

ವ॥ ಬೞಿಯಂ,

ಸುರತರು ಸತ್ಫಲಂಗಳನುದಂಚಿತ ಕಲ್ಪಲತಾಸಮನ್ವಿತಂ
ಧರಿಸಿ ವನಸ್ಥವಾದ ತೆಱದಿಂ ನಿಜನಂದನರಿಂ ಕಳತ್ರದಿಂ।
ಪರಿವಡೆದಂ ಸಮಸ್ತವಿಬುಧಪ್ರಿಯನುನ್ನತಮೂರ್ತಿ [ಬಂದು] ಬಂ
ಧುರತರವೀರಸೇನನೃಪನಂದನನುನ್ನತಹೇಮಪೀಠದೊಳ್ ॥೭೪೫॥

ಲಲಿತಮುಖೇಂದುಮೂರ್ತಿ ರತಿ ಯೌವನಲಕ್ಷ್ಮಿ ತನುಪ್ರಕಾಶನಿ
ರ್ಮಳಸುಧೆ ಕೋಮಳಾಧರಮರುನ್ಮಣಿ ಪೂರ್ಣಕಟಾಕ್ಷ ಕಾಮದೋ।
ಜ್ಜ್ವಲಸುರಧೇನು ಭೀಮತನಯಾರ್ಣವದೊಳ್ ನಿಷಧೇಂದ್ರಮಂದರಾ
ಚಲನಿಜಸಂಗದಿಂ ಪ್ರಕಟವಪ್ಪುದು ನೋೞ್ಪೊಡಿದಾವವಿಸ್ಮಯಂ ॥೭೪೬॥

ಓಪಳ ಪುಣ್ಯವಲ್ತೆ ಋತುಪರ್ಣನ ಸಾರಥಿಯಾಗಿ ಬಂದ ವಿ
ದ್ರೂಪಿ ವಿಚಾರಿಸಲ್ ನಳನೃಪಾಲಕನಾದನಸಂಕೆಯಿಂ ಪಿಕಾ।
ಳಾಪೆ ಕಟಾಕ್ಷಕಾಂತಿವನಮಾಲೆಯನಿಕ್ಕೆ ಪುನಸ್ಸ್ವಯಂವರ
ಶ್ರೀ ಪರಮೋತ್ಸವಂಬಡೆದನೆಂದುದು ಪೌರಜನಂ ಮಹಾಜನಂ ॥೭೪೭॥

ವ॥ ಅದಂ ಕೇಳ್ದು,

ದಾವತಿವೆತ್ತುವಂದ ಋತುಪರ್ಣನೃಪಂ ಪುರದೊಳ್ ನಿರಂತರಂ
ತೀವಿದ ವಾರ್ತೆಯಂ ಪಲಬರಿಂ ತಿಳಿವಂತಿರೆ ಕೇಳ್ದು ಪಂದೆಯಂ।

[1] ದ. [2] ವನ.

ಪಾವಡರ್ದಂತೆ ಮೆಯ್ಮಱೆದು ಸ್ವೈವೆಱಗಾಗಿ ಪುನಸ್ಸ್ವಯಂವರಂ
[1]ದೇ[1]ವಿಗೆ ಚೆಲ್ವನಾಯ್ತು ಸತಿಬುದ್ಧಿ ಚತುರ್ಗುಣವಲ್ತೆ ಭಾವಿಸಲ್ ॥೭೪೮॥

ವ॥ ಎಂದು,

ಏತೆಱದಿಂ ಬಾಹುಕವೆಸ
ರೀತಂಗಾಯ್ತೀಗಳದೆಂತು ಪೋಯ್ತು ನಳಪ್ರ ।
ಖ್ಯಾತಿಯದೆಂತಾಯ್ತೆಂದಿಪ
ನಾತುರದಿಂ ನೋಡಲೆಯ್ದಿದಂ ಋತುಪರ್ಣಂ ॥೭೪೯॥

ವ॥ ಅಂತು ಋತುಪರ್ಣಂ ಬಂದು ವಿನಯಪುರಸ್ಸರಂ ಕೇಳ್ವುದುಂ,

ಕಲಿಪೊರ್ದಲ್ ಪೊಱಮಟ್ಟು ಪೋದನಿದಿರೊಳ್ ಕರ್ಕೋಟಕಂ ಕಂಡು ತ
ನ್ನೊಲವಿಂ ಕರ್ಚಿದೊಡಾಯ್ತು ಬಾಹುಕವೆಸರ್ ವಿದ್ರೂಪದಿಂದೀಗಳಾ ।
ಕಲಿ ಪಿಂಗಲ್ ಫಣಿಯಿತ್ತ ವಸ್ತ್ರವೆರಡಂ ಸರ್ವಾಂಗದೊಳ್ ತಾಳ್ದಿರಲ್
ನಳನಾದೆಂ ಋತುಪರ್ಣ ಕೇಳ್ ನಿಜಪುರಕ್ಕೆಯ್ದಶ್ವಹೃದ್ವಿದ್ಯೆಯಿಂ ॥೭೫೦॥

ವ॥ ಎಂದೆಲ್ಲರಱಿವಂದದಿಂ ಋತುಪರ್ಣನಂ ಮನ್ನಿಸಿ ಕಳುಪಲಾತಂ,

ಮತಿಯುಂ ಲಜ್ಜೆಯನಾರ್ಪಿನುತ್ತಮಿಕೆಯುಂ ಸಾಮರ್ಥ್ಯವಂ ಮುನ್ನಿನು
ನ್ನತಿಯುಂ ಸತ್ಯವನೇೞ್ಗೆವೆತ್ತ ಸುಖಮುಂ ಮಯ್ಯಾಣ್ಕೆಯುಂ ನೀತಿಯುಂ ।
ಧೃತಿಯುಂ ಧೈರ್ಯವನುತ್ತಮಾಚರಣಮುಂ ಗಾಂಭೀರ್ಯವಂ [ . . . ]
ನುತಿಯುಂ ಮುತ್ತುಟಿದೆಲ್ಲವಂ ಕಿಡಿಸುಗುಂ ಬೆಂದಾಸೆಯೆಂದಂ ನೃಪಂ॥೭೫೧॥

ವ॥ ಎಂದಾತನತ್ತಲ್ ಪೋಗೆ,

ಕಲಿಬಿಲದೊಳ್ ನಳೋರ್ವಿಪನಿದಾನವಹೀಂದ್ರವಿಷಾರ್ಚಿರಕ್ಷೆಯಿಂ
ಚಲಿಸದೆ ಪಾರ್ಥಿವಾಶ್ರಯದಿನಿರ್ದುದನುದ್ಧಮತಿಪ್ರಭಂಜನೋ ।
ಜ್ಜ್ವಲಬಲದಿಂ ವಿದರ್ಭನೃಪನಂದನೆ ಸಾಧಕಿ ಕಂಡು ಸಾಧಿಸಲ್
ತೊಳಗುಗೆ ಸಂತತಂ ನಿಳಯದೊಳ್ ನೆಲಸಿರ್ಪುದಿದೇಂ ವಿಚಿತ್ರಮೋ ॥೭೫೨॥

ವ॥ ಅಂತು ಕತಿಪಯದಿನಂಗಳಿರ್ದು,

ಅಕ್ಷದ್ಯೂತದಿನೆನ್ನ ವಿ
ಪಕ್ಷಿಗೆ ಸೋಲ್ತೆಂ ಮದೀಯರಾಜ್ಯವನಾತಂ ।
ಗಕ್ಷಯದುಃಖವನೀವೆಂ
ಸ್ವಕ್ಷೇತ್ರವನಾಡಿ ಗೆಲ್ವೆನಿದು ಸತ್ಯತರಂ ॥೭೫೩॥

[1] ದಿ.

ವ॥ ಎಂದು ವಿದರ್ಭರಾಜನಿಂ ಕಳುಹಿಸಿಕೊಂಡು,

ಮಱುಜೂಜಂ ಕುಡುವೇೞ್ಪುದಾಂ ರವಣಮುಂ ಬೇೞ್ಪಂತುಟಂ ತಂದೆನೆಂ
ದಱಪಲ್ಕೊರ್ವ ಕಠೋರವಾಕ್ಯಮುಖನಂ ದೂತಟ್ಟೆ ತನ್ನೈಷಧಂ ।
ತಱಿಸಂದಂ ಕರಿಪುಷ್ಕರಂಗೆ ಕಲಿಯಿಂ ಮುಂಸೋಲ್ತ ರಾಜ್ಯಕ್ಕೆ ಮೆ
ಯ್ಮಱುಕಂ ಪಿಂಗಿ ರಹಸ್ಯದಿಂ ಪುರಜನಂ ಕಂಡತ್ತು ಸೋತ್ಸಾಹದಿಂ॥೭೫॥

ವ॥ ಅಂತು ವಿದರ್ಭನಿಂದಾದ ಸಕಲಸಂಭ್ರಮಮಂ ಬೆರಸು ನಳಂ ಬರ್ಪುದುಂ,

ಬರವೇೞ್ ಪೋ ಮಱುಜೂಜನಾಡಿ ರವಣಂ ಪೋಗಿರ್ದ ತನ್ನಂಗನಾ
ಭರಣಂ ಪೋಗಿ ಸುಸಾಧ್ವಿಯಂ ಸುದತಿಯಂ ಸೋಲ್ವಂದಮುಂಟಾದೊಡೆಂ।
ದರುಣಾಕ್ಷಂ ಸ್ಫುಟಕೋಪದಗ್ಧಹೃದಯಂ ದಷ್ಟೋಷ್ಠನಂದಾಗಿ ಪು
ಷ್ಕರಕಂ ತಾಂ ಮಗುೞ್ದಟ್ಟಿದಂ ಕಡುಪಿನಿಂ ಬಂದಾತನಂ ದೂತನಂ ॥

ವ॥ ಅವನಾ ಮಾೞ್ಕೆಯಿಂ ಪೇೞ್ವುದುಂ ಪುಷ್ಕರನೆಡೆಗೆ ನೈಷಧಂ ಬಂದು,

ಸರಿಸದ ಪೊನ್ನ ಬೆಳ್ಳಿಗಳ ಬಾರಿಯ ಸಾರಿಯನೈದು ನಾಲ್ಕು ನಾ
ಲ್ಕೆರಡುಮನೋರಣಂಬಡೆದು ಪೂಡಿ ಮದದ್ವಿಪದಂತದಕ್ಷಮಂ ।
ಪರಿಕಿಸಿ ನೋಡಿಯೊಡ್ಡವಿನಿತೆಂದು ಪಲರ್ ಕಿತವರ್ಗೆ ಕೋಪಮಂ
ಕುರಿಸಲಿಳಾಧಿಪಂ ನಗುತ ಡಾಳಿಸಿದಂ ಬೆದಱಿಕ್ಕೆ ಪುಷ್ಕರಂ ॥೭೬॥

ಒಡ್ಡಿದಸಾರಿಯಿಂ ತಿವಿವ ಕಯ್ಯೊಡನಿಕ್ಕುವ ಕಟ್ಟಿ ಬಿಟ್ಟು ಮ
ತ್ತೊಡ್ಡುವ ಕೊಂಬನೆಬ್ಬಿಸುವ ಸಾರಿಗಳಂ ಸೆಱೆಗೆಯ್ವ ಜಾತಿನಿಂ ।
ದೊಡ್ಡವನೊಯ್ಯನೇಱಿಸುವ ಡಾಳವನೊತ್ತುವ ತಿದ್ದಿಕೊಳ್ಳೆನಲ್
ಚಡ್ಡಿಸಿ ನಿಲ್ವ ನೂತನದುರೋದರಕೇಳಿ ಪಳಾಳವಲ್ಲವೇ ॥೭೭॥

ಏಱಿಸಿದೊಡ್ಡವಂ ಬಿಡದೆ ಗೆಲ್ವ ಕೆರಳ್ವತೆ ಲೆಕ್ಕದಾಯಮಂ
ತೋಱದರೆಂಬ ಕ್ರಮಱೆಯದೊಂದೆರಡೆಂಬ ಸುತ್ತರೇಖೆಯಂ ।
ಕೀಱಿನದಾಯಮಂ ಪಿಡಿವ ಕೋಪಿಸಿ ಗೆಲ್ವ ಪೆಱರ್ಗೆ ಡಾಳವಂ
ಮಾಱುವ ಬಿನ್ನಣಂ ಬಡೆದುದಂತವರಿರ್ವರೊಳಕ್ಷಖೇಳನಂ ॥೭೮॥

ದ್ವಿಗುಣಂ ಪೋದುದು ಪೋಗಲಿರ್ಪುದದೊಚ್ಚೊತ್ತಂ ಬರಲ್ ಗೆಡ್ಡೆನಿ
[1]ತ್ತಿಗನೊಂದೇ ಕಡು ಪೊಲ್ಲದುಂಟುಟಿದವೆಲ್ಲಂ ಕೊಂಬೆನೇಯರ್ಥಮಂ ।
ತೆಗೆ ಕಯ್ಯಂ ಬಿಡು ಡಾಳಿಪೆಂ ತಡೆಯದಿರ್ ಹಾಸಂಗಿಯಂ ನಿನ್ನ ಬಾ
ಡ್ಕೆಗಿದೊಂದಾಟವೆನುತ್ತೆ ನೈಷಧನೃಪಂ ಗೆಲ್ದಂ ಸಮುಸ್ತೋರ್ವಿಯಂ ॥

---

[1] ತ್ರಿವ.

ಬೇಡಿದ ದಾಯಂ ಬೀಟಲ್
ಪೂಡಿದ ಪಲಗೆಗಳನೆಲ್ಲವಂ ಗೆಲ್ದಂ ಕೈ ।
ಗೂಡಿತ್ತು ಬಯಕೆ ನೃಪತಿಗೆ
ಗಾಡಿಯೊಳಂದಕ್ಷಹೃದಯವೇಂ ಕೇವಳಮೇ ॥೭೬೦॥

ತುರಗ[ವ]ನಿಭವಂ ಕೋಶವ
ನರಮನೆಯೊಳಗುಳ್ಳದೆಲ್ಲವಂ ರಾಜ್ಯವನೊಂ ।
ದರೆಜಾವದೊಳಾಡಿ ನರೇ
ಶ್ವರನನಿತಂ ಗೆಲ್ದು ನೂಂಕಿದಂ ಪುಷ್ಕರನಂ ॥೭೬೧॥

ವ॥ ಅಂತು ನೂಂಕಿ,

ವನಿತೆಯರೊಲ್ಮೆ ನೀಚರ ಸಖಿತ್ವ ಸ[1]ಪತ್ನರ[1] ಮಾತು ಕನ್ನಗ
ಳ್ಳರ ವಿಭವಂ ನೃಪಾಲಕರ ಪುನ್ನಜೆ ಬೂದಿಯ ಬೊಟ್ಟು ಯೌವನಂ ।
ಕನಸಿನ ರಾಜ್ಯಮುಕ್ಕೆನದ ರೂಪು ಬುಧರ್ಕಳ ಕೋಪವೇಲ್ಕೆ ಜೂ
ಜಿನ ಸಿರಿ ನಿತ್ಯವೆಂದು ಪರಿಣಾಮಿಸುವರ್ ಮರುಳನ್ನರಿರ್ಪರೇ ॥೭೬೨॥

ವ॥ ಆಗಳ್,

ಮಿಗೆ ತಲೆಗುತ್ತಿ ಬಾಯೊಣಗಿದಂತೆನಿತಿಲ್ಲವೆ ಕಂಡಕಂಡರಂ
ನಗೆಗೆಡೆಯಾಗಿ ಕಯ್ಯ ಚಿಟುಕಂ ಕಳೆವುತ್ತಿರದೂಯ್ಯನೆದುರ್ಗಮಂ ।
ಡೆಗೆ ಮುಸುಗಿಕ್ಕಿ ಮಯ್ಮುಱಿದು ಸುಯ್ವನೆ ಸುಯ್ದೆಡೆಗೆಟ್ಟು ಸೋಲ್ತು
ಪುಷ್ಕರನಡಿಯಿಟ್ಟನೊಂದೆರಡನಂತದನೀಕ್ಷಿಸಿದಂ ನಳೋರ್ವಿಪಂ ॥೭೬೩॥

ನಿನ್ನಾಧೀನವೆ ಕಲಿ ಮುಳಿ
ದೆನ್ನಂ ಬೇಸಱಿಸಲೆಂದು ಜೂಜಿನ ನೆವದಿಂ ।
ಬೆನ್ನಟ್ಟೆ ಬಿಟ್ಟನಲ್ಲದೆ
ಮುನ್ನೆಂದುಂ ಸೋಲವೆಂಬುದಂ ಕೇಳ್ದಱಿಯಂ ॥೭೬೪॥

ನಿನ್ನಯ ಮನೆವಾಳ್ತೆಗೆ ಮಿಗೆ
ಮುನ್ನೊಂದಿದರ್ಗೆಲ್ಲಮಂತುಟವಂ ಪಾಲಿಸಿಕೊಂ ।
ಡೆನ್ನಯ ರಾಜ್ಯದೊಳಿರು ಸುಖ
ದಿಂ ನೀನೆಂದಂದು ಕಳುಪಿದಂ ಪುಷ್ಕರನಂ ॥೭೬೫॥

ವ॥ ಆಗಳ್,

ರವಿ ತಲೆದೋಱಲಂಬುಜವರಲ್ದೊಱಗಿರ್ದಳಿ ಪಾಱುವಂತೆ ಮಾ
ಧವಮುತುವೆಯ್ದುತಿರಲ್ ತರುಚಯಂ ಪಸುರೇಱಿ ಸುರುಳ್ದು ನೀಳ್ದಪಂ ।

[1] ವತ್ಸದ.

ದೊವಲುದಿರ್ವಂತೆ ನೈಷಧನೃಪಂ ಬರಲಾ ನಿಷಧೋರ್ವಿ ಪೆರ್ಚಿಯು
ತ್ಸವದಿನಿರಲ್ಕೆ ಪೋದನುಸುರಿಕ್ಕದೆ ತಸ್ಕರನಂತೆ ಪುಷ್ಕರಂ ॥೭೬೬॥

ವ॥ ಆಗಳ್,

ಸುರೆಯುಂ ಬಾಡವಧೂಮವಂ [ಗರಳಮಂ] ಶೈವಾಳವಂ ಭಂಗವಂ
ನೊರೆಯಂ ನೂಂಕಿ ಸುರದ್ರುಮಿಂದಮೃತದಿಂ ಶ್ರೀಕಾಂತೆಯಿಂ ರತ್ನದಿಂ।
ಹರಿಯಿಂ ನಿತ್ಯಮಹತ್ತ್ವಮುಂ ಪಡೆದು ದುಗ್ಧಾಂಭೋಧಿಯೊಲ್ ಸಂತತಂ
ಪರಮಪ್ರೀತಿಯೊಳಿರ್ದ ನೈಷಧಪುರಂ ಚೆಲ್ವಾಯ್ತು ಸತ್ಸಂಗದಿಂ ॥೭೬೭॥

ವಿಮಲಪುರಕ್ಕಂದಾದುದು
ಮಿಮಳತ್ವಂ ದುಷ್ಟಪುಷ್ಕರಂ ಪೋದಂ ವಿ।
ಕ್ರಮಿ ಲೋಕಬಂಧು ಬಂದಂ
ದಮಯಂತೀವಲ್ಲಭಂ ಪರಾರ್ಧಚರಿತ್ರಂ ॥೭೬೮॥

ವ॥ ಬಟಿಯಂ,

ಪರಮಪ್ರೀತಿಯನಪ್ಪುಕೆಯ್ಯು ನಳಧಾತ್ರೀವಲ್ಲಭಂ ಸಿಂಹವಿ
ಷ್ಟರದೊಳ್ ಕುಳ್ಳಿರಲಚ್ಚಪುತ್ತಳಿಕೆಯಿಂ ಮಂತ್ರಿವ್ರಜಂ ರಾಜಪು।
ತ್ರರನೇಕರ್ ನಿಜಪೌರರಾಪ್ತರೊಸೆದಟ್ಟುಂಚೆಲ್ಲರುಂ ಕಾಣ್ಕೆಯಂ
ಚರಣಕ್ಕಿತ್ತು ನಿರೀಕ್ಷಿಸುತ್ತೆ ಮುಖವಂ ಕಯ್ಯೆತ್ತಿ ಮಯ್ಯಿಕ್ಕಿದರ್ ॥೭೬೯॥

ವಾರವಧೂಜನಂ ಕನಕಪಾತ್ರದೊಳೊಪ್ಪುವ ರತ್ನದೀಪದಿಂ
ದಾರತಿಯೆತ್ತಿ ತಮ್ಮ ನಯನಪ್ರಭೆಯಿಂ ಕುಸುಮೋಪಹಾರವಿ।
ಸ್ತಾರವನೊಲ್ದು ಮಾಡಿ ಮಣಿಕಂಕಣಝುಂಕೃತಿಯೊಪ್ಪೆ ಸಾರ್ದು ಕೂ
ಪಾರತರಂಗಸಾಮ್ಯಸಿತಚಾಮರವಂ ನಲಿದಿಕ್ಕಿದರ್ ಕೆಲರ್ ॥೭೭೦॥

ಪುರದೊಳಗಷ್ಟಶೋಭೆ ಪರಿರಂಜಿಸಲೊಪ್ಪುವ ಕೇರಿಕೇರಿಯೊಳ್
ಪರಿಪರಿಯಾಡೆ ಪೌರಜನವೆಣ್ದೆಸೆಯಂ ಮಿಗೆ ವಾದ್ಯಘೋಷವಂ।
ಬರನವರತ್ನಹೇಮಕುಸುಮಂಗಳನಿಕ್ಕೆಲದೊಳ್ ನಿವಾರಿಸು
ತ್ತುರುಮುದದಿಂ ನಮಸ್ಕರಿಸಿ ಕಯ್ಮುಗಿದಿರ್ದುದು ಸೇವಕವ್ರಜಂ ॥೭೭೧॥

ವ॥ ಅಂತಿರ್ದು,

ಮಱುಜೂಜನಾಡಿ ಗೆಲ್ದಂ
ಪೊಱಮಡಿಸಿದನೆನ್ನ ರಾಜ್ಯದಿಂ ಪುಷ್ಕರನಂ।

ಕುಱುಪಿದು ತನಯುರ್ಸ್ಗಹಿತರಿ
ಮಱುದಿವಸಂ ಮತ್ಪುರಕ್ಕೆ ಬಪ್ಪುದು ಬೇಗಂ ॥೭೭೨॥

ವ॥ ಅಂತು ದಮಯಂತಿಯುಂ ಕರಸೆ,

ವನಿತಾರತ್ನವಿದರ್ಭನಿಂದ ನೃಜಗತ್ಪ್ರಖ್ಯಾತನಿಂ ತಾತನಿಂ
ವಿನಯಂ ಕೈಮಿಗಲಂಘ್ರಿಗಳ್ಗೆಱಗಿ ತಾಂ ಬೀಳ್ಕೊಂಡು ಸಂತೋಷದಿಂ ।
ಜನಲೋಕಕ್ಕೆ ನವೀನವೆಂಗಜನಲೋಕಂ ಬಪ್ಪವೊಲ್ ಬಪ್ಪಳಂ
ಗನೆ ಪುತ್ರರ್ವೆರಸೊಲ್ದು ನೈಷಧಪುರಕ್ಕಾನಂದಸಂದೋಹದಿಂ ॥೭೭೩॥

ನಿರುಪಮಸಂಪದಂ ಸಕಳರಾಜ್ಯಸಮೃದ್ಧಸುಖಪ್ರವರ್ಧನಂ
ಪರಮಮಹೋತ್ಸವಂ ನಿಜಕಳತ್ರತನೂಭವಬಂಧುಸಂಗಮಂ ।
ಸ್ಥಿರತರಮಪ್ಪಿನಂ ತನಗನೇಕಯುಗಂ ವಿಜಯಪ್ರತಾಪದಿಂ
ನಿರವಧಿಕೀರ್ತಿಯುಂ ತಳೆದು ರಂಜಿಸುತಿರ್ದನುದಾರವಿಕ್ರಮಂ ॥೭೭೪॥

ಈ ಕೃತಿಯಂ ಮನಂ ಬಯಸಿ ಕೇಳ್ವ ಜನರ್ಗೆ ಸಮಸ್ತಶಾಶ್ವತ
ಶ್ರೀಕೃಪೆ ಪಿಂಗದಿರ್ಕೆ ಸತತಂ ಪರಮೋತ್ಸವನಿತ್ಯವೈಭವ ।
ಶ್ರೀಕೃತದೇಷ್ಟೆ ರಂಜಿಸುಗೆ ಕಲ್ಪಶತಂ ಕಲಿ ಪೋರ್ದದಿರ್ಕೆ ಶೋ
ಭಾಕೃತಿಯೊಂದಿ ನಿಲ್ಕೆ ಧರೆಮೇರುಮಹೀಧರಮೊಪ್ಪುತಿರ್ಪಿನಂ ॥೭೭೫॥

ಬಾಣಾಸುರವಿಜಯುಂ ಕ
ಲ್ಯಾಣನಳಖ್ಯಾತಿದಶಕುಮಾರಚರಿತ್ರಂ ।
ಕ್ಷೋಣೀಜನಕರ್ಣಮನಃ
ಪ್ರೀಣನವಿವು ಚಾಂಡರಾಜವಿರಚಿತಕೃತಿಗಳ್ ॥೭೭೬॥

# ಅನುಬಂಧ

## ನಳಕಥಾಸಾಹಿತ್ಯ

### ಸಂಸ್ಕೃತ

| ನಂ. | ಗ್ರಂಥದ ಹೆಸರು | ಕರ್ತೃ | ವಿಶೇಷಾಂಶ |
|---|---|---|---|
| ೧ | ನಲೋಪಾಖ್ಯಾನಂ .... | ವ್ಯಾಸ ಮಹರ್ಷಿ | ಭಾರತ (ವನಪರ್ವ ೪೯–೭೭ ಅಧ್ಯಾಯಗಳು) |
| ೨ | ,, .... | ಸೋಮದೇವಭಟ್ಟ | ಕಥಾಸರಿತ್ಸಾಗರ (ತರಂಗ ೫೬) |
| ೩ | ,, .... | ಗುಣಾಢ್ಯ | ಬೃಹತ್ಕಥಾಂತರ್ಗತ |
| ೪ | ಅಂತರ್ನಲಾಖ್ಯಾಯಿಕಾ | ಕ್ಷೇಮೇಂದ್ರ | ಬೃಹತ್ಕಥಾ ಮಂಜರೀ ಲಂಬಕ ೧೫. |
| ೫ | ನಲೋಪಾಖ್ಯಾನಂ ... | ಕ್ಷೇಮೇಂದ್ರ | ಭಾರತ ಮಂಜರೀ ಆರಣ್ಯ ಪರ್ವ (ಶ್ಲೋಕಗಳು ೩೭೨–೬೦೪) |
| ೬ | ,, | ದೇವಪ್ರಭಾ ಸೂರಿ | ಪಾಂಡವ ಚರಿತಾಂತರ್ಗತ |
| ೭ | ನಲಚರಿತಂ | ಹೇಮಚಂದ್ರಾಚಾರ್ಯ | ತ್ರಿಷಷ್ಟಿ ಶಲಾಕಾ ಪುರುಷ ಚರಿತ (ಪರ್ವ ೮, ಸ. ೩) |
| ೮ | ,, | ದೇವವಿಜಯ ಗಣಿ | ಪಾಂಡವ ಚರಿತಾಂತರ್ಗತ |
| ೯ | ,, | ಗುಣವಿಜಯ ಗಣಿ | ಗದ್ಯನೇಮಿನಾಥ ಚರಿತಾಂತರ್ಗತ. |
| ೧೦ | ,, | ಸೋಮಪ್ರಭಾಚಾರ್ಯ | ಕುಮಾರಪಾಲ ಪ್ರತಿಬೋಧ ಪ್ರಸ್ತಾವ ೧. |
| ೧೧ | ದವದಂತೀ ಚರಿತಂ .... | ವಿನಯಚಂದ್ರ ಸೂರಿ | ಮಲ್ಲಿನಾಥ ಚರಿತ್ರಂ (ಸರ್ಗ ೬) |
| ೧೨ | ದವದಂತೀ ಕಥಾ .... | ಜಿನಸಾಗರ ಸೂರಿ | ಕರ್ಪೂರ ಪ್ರಕರಃ (೩೬ ಪೂಜಾದ್ವಾರಂ). |
| ೧೩ | ,, | ಸೋಮತಿಲಕ ಸೂರಿ | ಶೀಲೋಪದೇಶ ಮಾಲಾಂತರ್ಗತ |
| ೧೪ | ದಮಯಂತೀ ಕಥಾ | ಶುಭಶೀಲಗಣಿ | ಭರತೇಶ್ವರ–ಬಾಹುಬಲಿ ವೃತ್ತ್ಯಂತರ್ಗತ. |
| ೧೫ | ನೈಷಧ ಚರಿತಂ .. | ಶ್ರೀಹರ್ಷ | |
| ೧೬ | ರಾಘವ ನೈಷಧೀಯಂ | ಶ್ರೀ ಹರದತ್ತಸೂರಿ | |
| ೧೭ | ಸಹೃದಯಾನಂದಂ ... | ಕೃಷ್ಣಾನಂದ | |
| ೧೮ | ಭೈಮೀ ಪರಿಣಯ ನಾಟಕಂ .... | ಮಂಡಿಕಲ್ ರಾಮಾ ಶಾಸ್ತ್ರಿ | |
| ೧೯ | ನಲಚರಿತ್ರ ನಾಟಕಂ | ನೀಲಕಂಠ ದೀಕ್ಷಿತ | |
| ೨೦ | ನಲದಮಯಂತೀಯಂ | ಕಾಲಿಪಾದ ತರ್ಕಾಚಾರ್ಯ | |
| ೨೧ | ನಲೋದಯ ಕಾವ್ಯಂ | ಕಾಳಿದಾಸ | |
| ೨೨ | ,, | ರವಿದೇವ | |
| ೨೩ | ನಲಾಭ್ಯುದಯಃ ... | ವಾಮನಭಟ್ಟಬಾಣ | |
| ೨೪ | ನಲ ಚಂಪೂಃ . | ತ್ರಿವಿಕ್ರಮಭಟ್ಟ | |
| ೨೫ | ನಲವಿಲಾಸ ನಾಟಕಂ | ರಾಮಚಂದ್ರ ಸೂರಿ | |

| ನಂ. | ಗ್ರಂಥದ ಹೆಸರು | ಕರ್ತೃ | ವಿಶೇಷಾಂಶ |
| --- | --- | --- | --- |
| ೨೬ | ಪುಣ್ಯಶ್ಲೋಕೋದಯ ನಾಟಕಂ | ದೇವೀಶರಣ ಕವಿ ಚಕ್ರವರ್ತಿ | |
| ೨೭ | ನಲ ವಿಕ್ರಮ ನಾಟಕಂ | ? | |
| ೨೮ | ನಲಾನಂದ ನಾಟಕಂ | ಜೀವವಿಬುಧ | (ಅಮುದ್ರಿತ) |
| ೨೯ | ನಲವರ್ಣನ ಕಾವ್ಯಂ | ಲಕ್ಷ್ಮೀಧರ | ,, |
| ೩೦ | ನಲಭೂಮಿಪಾಲರೂಪಕಂ | ? | ,, |
| ೩೧ | ನಲಚರಿತಂ (ಕಾವ್ಯ) ... | ? | ,, |
| ೩೨ | ನಲ ಯಾದವ ರಾಘವ ಪಾಂಡವೀಯಂ (ಕಾವ್ಯ) | ? | ,, |
| ೩೩ | ನಲ ಸ್ತೋತ್ರಂ | ? | ,, |
| ೩೪ | ದಮಯಂತೀ ಪರಿಣಯಂ | ? | ,, |
| ೩೫ | ಭೈಮೀ ಪರಿಣಯಂ | ರತ್ನಖೇಟ ದೀಕ್ಷಿತ | ,, |
| ೩೬ | | ವೆಂಕಟಾಚಾರ್ಯ | ,, |
| ೩೭ | ,, | ಶಠಕೋಪಾಚಾರ್ಯ | ,, |
| ೩೮ | ನಲ ಹರಿಶ್ಚಂದ್ರೀಯ ವಿಲೋಮ ಕಾವ್ಯಂ | | |
| ೩೯ | ದಮಯಂತೀ ಕಥಾ ವಿವರಣಂ | ಚಂಡಪಾಲ | ,, |
| ೪೦ | ದಮಯಂತೀ ಪರಿಣಯ ಚಂಪೂಃ | ಚಕ್ರಕವಿ | ,, |
| ೪೧ | ನಲ ವಿಲಾಸ ನಾಟಕಂ | ಅಹೋಬಲ ನೃಸಿಂಹಕವಿ | ,, |
| ೪೨ | ನಲಾಯನ ಕಾವ್ಯಂ | ಮಾಣಿಕ್ಯ ಚಂದ್ರಸೂರಿ | ,, |
| | | ಕನ್ನಡ | |
| ೧ | ನಳೋಪಾಖ್ಯಾನ (ಚಂಪು) | ಸಿ. ಶಿವಶಂಕರ ಶಾಸ್ತ್ರಿ | |
| ೨ | ನಳ ನಾಟಕ | ಡಿ. ಶಾಮರಾವ್ | |
| ೩ | ದಮಯಂತೀ ಚರಿತ್ರೆ (ಷಟ್ಪದಿ) | ಸೋಸಲೆ ಅಯ್ಯಾಶಾಸ್ತ್ರಿ | |
| ೪ | ನಳ ಚರಿತೆ (ಯಕ್ಷಗಾನ) | ವಿ. ಪುಟ್ಟಣ್ಣ | |
| ೫ | ನಳದಮಯಂತೀ ಪುಣ್ಯ ಚರಿತ್ರೆ | ಸಿ. ಶಿವಶಂಕರ ಶಾಸ್ತ್ರಿ | |
| ೬ | ನಳದಮಯಂತಿಯರ ಕಥೆ (ವಚನ ಕಾವ್ಯ) | ? | |
| ೭ | ದಮಯಂತೀ ಸ್ವಯಂವರ | ಬಸಪ್ಪಶಾಸ್ತ್ರಿ | |
| ೮ | ನಳಚರಿತ್ರೆ (ಷಟ್ಪದಿ) | ಕನಕದಾಸ | |
| ೯ | ನಳಚಂಪು (ನಳಚರಿತ್ರೆ) | ಚೌಂಡರಾಜ | |
| ೧೦ | ವೈಕುಂಠ ನಳಚರಿತ್ರೆ (ಯಕ್ಷಗಾನ) | ಶೇಷದಾಸ | ಅಮುದ್ರಿತ |
| ೧೧ | ನಳನಾಟಕ | ಪುಟ್ಟಣ್ಣ ಕವಿ | ,, |
| ೧೨ | ನಳಚರಿತ್ರೆ (ಯಕ್ಷಗಾನ) | ಲಿಂಗರಾಜ | ,, |
| ೧೩ | ,, | ದೇವಶಿಖಾಮಣಿ ಶ್ರೀನಿವಾಸ ಯ್ಯಂಗಾರ್ | ,, |

WD 4899—GBPM—500—15-10-50.